ಕರ್ನಾಟಕ

Vol - 11 October 2012 Issue No. 09 ₹ 5.00/-

ವಾರ್ಷಪತ್ರಿಕೆ

# ಸ್ಕೌಟ್ಸ್ ಮತ್ತು ಗೈಡ್ಸ್



# Karnataka Scout & Guide

*News Magazine*

**2011-12 ರ ಉತ್ತಮ ಕಾರ್ಯನಿರ್ವಹಣೆ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಪರ್ಯಾಯ ಫಲಕ ಹಾಗೂ ಪಾರಿತೋಷಕಗಳನ್ನು ಕೆಳಕಂಡ ಜಿಲ್ಲೆಗಳಿಗೆ ದಿನಾಂಕ 30.09.2012 ರಂದು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ 94ನೇ ರಾಜ್ಯ ಪರಿಷತ್ ಸಭೆಯಲ್ಲಿ ಜಿಲ್ಲೆಗಳ ಪದಾಧಿಕಾರಿಗಳಿಗೆ - ರಾಜ್ಯ ಸಂಸ್ಥೆಯ ಪದಾಧಿಕಾರಿಗಳು ವಿತರಿಸಿ ಗೌರವಿಸಿದರು.**



ಪ್ರಥಮ ಸ್ಥಾನ : ದಾವಣಗೆರೆ ಜಿಲ್ಲೆ
ಅಬ್ದುಲ್ ಗಫಾರ್ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಉಡುಪಿ ಜಿಲ್ಲೆ
ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಫಲಕ



ತೃತೀಯ ಸ್ಥಾನ : ಚಿತ್ರದುರ್ಗ ಜಿಲ್ಲೆ
ಮೇಜರ್ ವೈ.ವಿ.ಕೆ. ಮೂರ್ತಿ ಪರ್ಯಾಯ ಫಲಕ

# ಶ್ರದ್ಧಾಂಜಲಿ - GONE HOME





**ಜನನ**
**07-05-1934**



**ನಿಧನ**
**04-10-2012**

ಸಹಾಯಕ ರಾಜ್ಯ ಸ್ಕೌಟ್ ಆಯುಕ್ತರು (ಕಾರ್ಯಯೋಜನೆಗಳು) ಹಾಗೂ ಮಾಜಿ ರಾಜ್ಯ ಕೋಶಾಧಿಕಾರಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಸಂಸ್ಥಾಪಕರು - ಎಂ.ಇ.ಸಿ. ಶಿಕ್ಷಣ ಸಂಸ್ಥೆಗಳು, ಯಲಹಂಕ, ಬೆಂಗಳೂರು, ಸಂಸ್ಥೆಯ ಹಿರಿಯ ನಾಯಕರೂ-ಸಹೃದಯಿಗಳೂ ಸಜ್ಜನರಾಗಿದ್ದ **ಶ್ರೀ ಎನ್. ಚಂದ್ರಶೇಖರ್** ರವರು **4 ಅಕ್ಟೋಬರ್ 2012 ರಂದು** ಬೆಂಗಳೂರಿನಲ್ಲಿ ಹೃದಯಾಘಾತದಿಂದ ನಿಧನ ಹೊಂದಿದರು. ಅವರಿಗೆ 78 ವರ್ಷವಾಗಿತ್ತು.

ಶ್ರೀ ಚಂದ್ರಶೇಖರ್‌ರವರು ಸ್ಕೌಟ್-ಗೈಡ್ ಚಳವಳಿಯಲ್ಲಿ ನಾಲ್ಕು ದಶಕಗಳಿಂದ ಸಂಸ್ಥೆಯ ವಿವಿಧ ಹಂತಗಳಲ್ಲಿ ಸಕ್ರಿಯವಾಗಿ ಸೇವೆ ಸಲ್ಲಿಸಿರುತ್ತಾರೆ. ಬೆಂಗಳೂರು ಉತ್ತರ ಜಿಲ್ಲೆಯಲ್ಲಿ ಸಹಾಯಕ ಜಿಲ್ಲಾ ಆಯುಕ್ತರಾಗಿ ರಾಜ್ಯ ಸಂಸ್ಥೆಯ ಪ್ರಕಟಣೆ ವಿಭಾಗದ ಸಮಿತಿಯ ಸದಸ್ಯರಾಗಿ ಉತ್ತರ ಜಿಲ್ಲಾ ಸಂಸ್ಥೆಯಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾಗಿ - ರಾಜ್ಯಕೋಶಾಧಿಕಾರಿಯಾಗಿ - ಪ್ರಸ್ತುತ ಕಾರ್ಯಯೋಜನೆಗಳ ಸಹಾಯಕ ರಾಜ್ಯ ಆಯುಕ್ತರಾಗಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ಸೇವೆಯನ್ನು ಸಲ್ಲಿಸಿರುತ್ತಾರೆ. ದೊಡ್ಡಬಳ್ಳಾಪುರದಲ್ಲಿರುವ ಡಾ. ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ ಹಾಗೂ ಬೆಂಗಳೂರಿನ ಅರಮನೆ ರಸ್ತೆಯಲ್ಲಿರುವ ಶಾಂತಿಗೃಹ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರಗಳ ಅಭಿವೃದ್ಧಿ ಉಪಸಮಿತಿಗಳ ಸದಸ್ಯರಾಗಿ, ಎರಡು ದಶಕಗಳ ಕಾಲ ಅವುಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸಲಹೆ-ಸೂಚನೆಗಳನ್ನು ನೀಡಿ, ಕೇಂದ್ರಗಳ ಅಭಿವೃದ್ಧಿಗೆ ಮಾರ್ಗದರ್ಶನ ಮಾಡಿದ್ದಾರೆ. ಹಲವಾರು ವರ್ಷಗಳ ಕಾಲ ವೃತ್ತಿಪರ ಲೆಕ್ಕಪರಿಶೋಧಕರಾಗಿ ಕಾರ್ಯನಿರ್ವಹಿಸಿದ ಅಪಾರ ಅನುಭವ ಅವರದಾಗಿತ್ತು. ಧರ್ಮಪತ್ನಿ ಶ್ರೀಮತಿ ವಿಶಾಲಾಕ್ಷಮ್ಮನವರ ಮಾರ್ಗದರ್ಶನದಲ್ಲಿ ಯಲಹಂಕದಲ್ಲಿ ಎಂ.ಇ.ಸಿ. ಶಿಕ್ಷಣ ಸಂಸ್ಥೆಗಳನ್ನು ನಾಲ್ಕು ದಶಕಗಳ ಹಿಂದೆಯೇ ಸ್ಥಾಪಿಸಿ - ಸದ್ಯದಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ ಪ್ರತಿಷ್ಠಿತ ವಿದ್ಯಾಸಂಸ್ಥೆಯಾಗಿ ಬೆಳೆಸುವಲ್ಲಿ ಅಹರ್ನಿಶಿ ಶ್ರಮಿಸಿರುತ್ತಾರೆ.

ಶ್ರೀ ಚಂದ್ರಶೇಖರ್ ಅವರು ಸ್ಕೌಟ್-ಗೈಡ್ ಚಳವಳಿಗೆ ಸಲ್ಲಿಸಿದ ವಿಶಿಷ್ಟವಾದ ಸೇವೆಯನ್ನು ಪರಿಗಣಿಸಿ ರಾಷ್ಟ್ರಮಟ್ಟದ ಸ್ಕೌಟ್-ಗೈಡ್ ಪ್ರಶಸ್ತಿಯಾದ **"ಬೆಳ್ಳಿ ನಕ್ಷತ್ರ"** ಪುರಸ್ಕಾರವನ್ನು 2008-09 ರಲ್ಲಿ ನವದೆಹಲಿಯ ರಾಷ್ಟ್ರಪತಿಭವನದ ಅಶೋಕಹಾಲ್‌ನಲ್ಲಿ ಅಂದಿನ ರಾಷ್ಟ್ರಪತಿಗಳಾಗಿದ್ದ ಶ್ರೀಮತಿ ಪ್ರತಿಭಾದೇವಿಸಿಂಗ್ ಪಾಟೀಲ್ ಅವರಿಂದ ಪಡೆದು ಗೌರವಿಸಲ್ಪಟ್ಟಿದ್ದರು.

ಶ್ರೀ ಚಂದ್ರಶೇಖರ್ ಅವರ ಅಕಾಲಿಕ ನಿಧನ ಸ್ಕೌಟ್-ಗೈಡ್ ಚಳವಳಿಗೆ ಅವರ ಕುಟುಂಬಕ್ಕೆ ಎಂ.ಇ.ಸಿ. ಶಿಕ್ಷಣ ಸಂಸ್ಥೆಗೆ ತುಂಬಲಾರದ ನಷ್ಟವಾಗಿದೆ. ಮಗಳು ವಿದ್ಯಾ- ಮಗ ವಿನಯ್, ಸೊಸೆ ಸಂಧ್ಯಾ, ಮೊಮ್ಮಗಳು ನಯನ ಹಾಗೂ ಅಪಾರ ಅಭಿಮಾನಿಗಳು, ಬಂಧು-ಮಿತ್ರರನ್ನು ಶ್ರೀ ಚಂದ್ರಶೇಖರ್‌ರವರು ಅಗಲಿರುತ್ತಾರೆ. ಅವರ ಆತ್ಮಕ್ಕೆ ಚಿರಶಾಂತಿ ಮತ್ತು ಸದ್ಗತಿ ಕೊಡುವಂತೆ ಭಗವಂತನಲ್ಲಿ ಪ್ರಾರ್ಥಿಸುತ್ತೇವೆ. ರಾಜ್ಯ ಸಂಸ್ಥೆಯ ಅಧ್ಯಕ್ಷರು, ಉಪಾಧ್ಯಕ್ಷರುಗಳು, ಪದಾಧಿಕಾರಿಗಳು, ಕಾರ್ಯಕಾರಿ ಸಮಿತಿ ಸದಸ್ಯರುಗಳು ಹಾಗೂ ಸಂಸ್ಥೆಯ ಸದಸ್ಯರುಗಳ, ನೌಕರರುಗಳ ಪರವಾಗಿ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

# Editor's Desk

"We must change boys from a 'what can I get' to a 'what can I give' attitude."
Lord Baden Powell

The quote of Lord BP gives an important message to all of us about the basic concept of Scout/Guide movement. Unfortunately today we all begin our own conversation with a simple question -what are we going to get? when we do it or if we attend or if we go there ;which is absolutely a wrong approach to serve the movement. To gallop the movement it would be appreciated if we all come out to offer what we can do to help to train the boys/girls towards their all round development to become responsible and accountable citizens and the future of tomorrow.

All our activities are related to progressive badge system which include Service to God, Self and others (community/society) and needless to say all this leads the young people to develop a positive attitude to give out their best to society by serving and becoming a responsible part of it. Further the attitude will become part of their personality and as adults they become a giver to the society rather than always being a burden or expecting from society.

During this process the youth should relate themselves to our movement with commitment and belongingness. This is possible only when we guide them and set ourselves as example. Friends it is my personal feelings that, we have joined the movement with a purpose to serve and let's keep up the same spirit till we are part of the movement, by adopting 'what can I get' to a 'what can I give' attitude.

We are getting lot of support from various corners including the Government departments, let's put them in proper use and lead the movement with the same values and fundamentals for what we are respected and also recognized. It is not that we should not take the support? It is that, even if we don't get it, let's march ahead to do our duties to serve the movement.

Oflate we have heard murmurs of not getting enough support from the expected sources or less numbers in participation in events/courses or not getting the job done. These are all excuses to coverup our failures To achieve our aims we should come out with an attitudinal change and if need be we should go an extra mile. We are not an extended arm of the bureaucracy but are a part of a voluntary movement within the parameters of rules and regulations of the government.

Lets have a fond hope for a change and the change for better role to be played by all of us to guide the youth from a 'what can I get' to a 'what can I give' attitude.

M.A. KHALID
Editor

# ಮುಖ್ಯ ಆಯುಕ್ತರ ನುಡಿ.......

**ಸ್ಕೌಟ್-ಗೈಡ್ ಚಳವಳಿಯಲ್ಲಿ ಸೇವೆ ಸಲ್ಲಿಸುತ್ತಿರುವರೆಲ್ಲರಿಗೆ - ಚಳವಳಿಯ ಅಭಿಮಾನಿಗಳಿಗೆ ಕನ್ನಡ ರಾಜ್ಯೋತ್ಸವ ಮತ್ತು ದೀಪಾವಳಿ ಹಬ್ಬದ ಹಾರ್ದಿಕ ಶುಭಾಶಯಗಳು**

ಆತ್ಮೀಯರೆ,

ಇತ್ತೀಚಿನ ದಿನಗಳಲ್ಲಿ ಚಳವಳಿಯ ಬೆಳವಣಿಗೆಯಲ್ಲಿ ಸಕ್ರಿಯವಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದ್ದ ಇಬ್ಬರು ಹಿರಿಯ ನಾಯಕರು ನಮ್ಮನಗಲಿದ್ದಾರೆ. ಸ್ಕೌಟ್-ಗೈಡ್ ಚಳವಳಿಯಲ್ಲಿ ಪ್ರಮುಖ ಕರ್ತವ್ಯ ನಿರ್ವಹಿಸಿದ್ದ **ಶ್ರೀ ಐ.ಎ. ಕೈರಣ್ಣ** ಅವರು **ದಿನಾಂಕ 12-09-2012 ರಂದು** ಮಂಗಳೂರಿನಲ್ಲಿ ನಮ್ಮನಗಲಿದರು. ಮತ್ತೊಬ್ಬರು - ಸಂಸ್ಥೆಯಲ್ಲಿ ವಿವಿಧ ಹಂತಗಳಲ್ಲಿ ನಾಲ್ಕು ದಶಕಗಳ ಕಾಲ ಸೇವೆ ಸಲ್ಲಿಸಿ - ದಿನಾಂಕ 30 ಸೆಪ್ಟೆಂಬರ್ 2012 ರಂದು ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ 94ನೇ ರಾಜ್ಯ ಪರಿಷತ್ತಿನ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಎಲ್ಲರೊಂದಿಗೂ ಅತ್ಯಂತ ಆತ್ಮೀಯವಾಗಿ ಕುಶಲ ವಿಚಾರಿಸಿದ ಸಂಸ್ಥೆಯ ಹಿರಿಯರೂ, ಗೌರವಾನ್ವಿತ ಹಿಂದಿನ ರಾಜ್ಯ ಕೋಶಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸಿದ್ದ ಪ್ರಸ್ತುತ ರಾಜ್ಯ ಸಹಾಯಕ ಆಯುಕ್ತರಾಗಿದ್ದ **ಶ್ರೀ ಎನ್. ಚಂದ್ರಶೇಖರ್** ಅವರು ತೀವ್ರ ಹೃದಯಾಘಾತದಿಂದ **4 ಅಕ್ಟೋಬರ್ 2012 ರಂದು** ನಿಧನ ಹೊಂದಿದರು.

ಶ್ರೀ ಚಂದ್ರಶೇಖರ್ ಮತ್ತು ನನ್ನ ಪರಿಚಯ ನಾನು ವಿದ್ಯಾರ್ಥಿಯಾಗಿದ್ದಾಗಲೇ ಆಗಿತ್ತು. ನನಗೆ ಅವರು ಸಾಮಾಜಿಕವಾಗಿ-ಸಾರ್ವಜನಿಕವಾಗಿ-ವೈಯಕ್ತಿಕವಾಗಿ-ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಯಲ್ಲಿ ನಾಲ್ಕು ದಶಕಗಳಗೂ ಹೆಚ್ಚುಕಾಲ ಮಾರ್ಗದರ್ಶಕರಾಗಿ ಸಲಹೆ-ಸೂಚನೆ ನೀಡಿರುತ್ತಾರೆ.

ಶ್ರೀ ಚಂದ್ರಶೇಖರ್ - ಅವರು ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆಯಲ್ಲಿ ಸಹಾಯಕ ಜಿಲ್ಲಾ ಆಯುಕ್ತರಾಗಿ, ಜಿಲ್ಲಾ ಆಯುಕ್ತರಾಗಿ - ರಾಜ್ಯ ಸಂಸ್ಥೆಯಲ್ಲಿ ರಾಜ್ಯ ಕೋಶಾಧಿಕಾರಿಗಳಾಗಿ - ಡಾ. ಆನಿಬೆಸೆಂಟ್ ಮತ್ತು ಶಾಂತಿಗೃಹ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರಗಳ ಅಭಿವೃದ್ಧಿ ಸಮಿತಿಗಳ ಸದಸ್ಯರಾಗಿ, ಸಹಾಯಕ ರಾಜ್ಯ ಸ್ಕೌಟ್ ಆಯುಕ್ತರಾಗಿ- ನಾಲ್ಕು ದಶಕಗಳಗೂ ಹೆಚ್ಚುಕಾಲ ಚಳವಳಿಯ ಬೆಳವಣಿಗೆಗೆ ಸದಾಕಾಲ ಸಹಕರಿಸಿರುವುದು ಅವರೊಂದಿಗೆ ಒಡನಾಡಿದ - ಕೆಲಸ ಮಾಡಿದ ಎಲ್ಲರಿಗೂ ಚಿರಪರಿಚಿತವಾಗಿದೆ.

ಸಂಸ್ಥೆಯ ಹಿರಿಯ ಸಹೋದ್ಯೋಗಿಯಾಗಿ ಡಾ. ಆನಿಬೆಸೆಂಟ್ - ಶಾಂತಿಗೃಹ ಹಾಗೂ ಕೊಂಡಜ್ಜಿ ತರಬೇತಿ ಕೇಂದ್ರಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಬಗ್ಗೆ ಅಪಾರವಾದ ಆಸಕ್ತಿಯಿಂದ ಆಗಿಂದಾಗ್ಗೆ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ದಿನಾಂಕ 28 ಸೆಪ್ಟೆಂಬರ್ 2012 ರಂದು ನಾನು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರಕ್ಕೆ ರಾಜ್ಯ ಪರಿಷತ್ತಿನ ಸಭೆಗೆ ಬೇಕಾದ ಅವಶ್ಯಕತೆಗಳು ಹಾಗೂ ಪ್ರಗತಿಯಲ್ಲಿರುವ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಗಳ ಪರಿಶೀಲನೆಗೆ ಹೋದಾಗ ಶ್ರೀ ಚಂದ್ರಶೇಖರ್ ಅವರು ನನ್ನೊಂದಿಗೆ ಬಂದು ಸಂಬಂದಪಟ್ಟ ಪ್ರಾಜೆಕ್ಟ್

ಇಂಜಿನಿಯರ್ ಹಾಗು ವಾರ್ಡನ್ ಅವರಿಗೆ ಹಲವಾರು ಸಲಹೆ ಸೂಚನೆಗಳನ್ನು ನೀಡಿದರು. ಇಂತಹ ಹಿರಿಯ ಜೀವಿ-ಮುತ್ಸದ್ಧಿ ಸಹೃದಯಿ ಇಂದು ನಮ್ಮೊಡನಿಲ್ಲ. ಇವರ ಅಕಾಲಿಕ ನಿಧನ ಅವರನ್ನು ಹತ್ತಿರದಿಂದ ಬಲ್ಲ ಎಲ್ಲರಿಗೂ ತೀವ್ರ ಆಘಾತವಾಗಿದೆ. ಅವರ ಮಕ್ಕಳಾದ ವಿದ್ಯಾ-ವಿನಯ-ಸೊಸೆ ಸಂಧ್ಯ ಮೊಮ್ಮಗಳು ನಯನ ಹಾಗೂ ಬಂಧು-ಬಳಗದವರಿಗೆ ಆಗಿರುವ ಅಪಾರ ದುಃಖವನ್ನು ಭರಿಸಲು ಶಕ್ತಿಕೊಡುವಂತೆ ಹಾಗೂ ಅವರ ಆತ್ಮಕ್ಕೆ ಸದ್ಗತಿ ದೊರಕಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯವರು ದಿನಾಂಕ 4 ಅಕ್ಟೋಬರ್‌ನಿಂದ 10 ರ ವರೆಗೆ 10 ವಿವಿಧ ಹಂತದ ತರಬೇತಿ ಶಿಬಿರಗಳನ್ನು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಆಯೋಜಿಸಿದ್ದರು. ತರಬೇತಿಗಳಲ್ಲಿ 232 ಅಭ್ಯರ್ಥಿಗಳು ಹಾಗೂ 48 ನಾಯಕರುಗಳು-ನಾಯಕಿಯರು ಸಹಾಯಕರುಗಳು ಸೇವೆಸಲ್ಲಿಸಿ ತರಬೇತಿ ಶಿಬಿರಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿರುತ್ತಾರೆ. ದಿನಾಂಕ 9 ಅಕ್ಟೋಬರ್ 2012 ರ ಸಂಜೆ ಜರುಗಿದ ಸಮಾರೋಪ ಸಮಾರಂಭದಲ್ಲಿ ನಾನು ಭಾಗವಹಿಸಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ - ಭಾಗವಹಿಸಿದ ಅಭ್ಯರ್ಥಿಗಳಿಗೆ - ಶಿಬಿರವನ್ನು ಅತ್ಯಂತ ಯಶಸ್ವಿಯಾಗಿ ನಡೆಸಲು ಸಕ್ರಿಯವಾಗಿ ಸಹಕರಿಸಿದ ಎಲ್ಲಾ ನಾಯಕ-ನಾಯಕಿಯರುಗಳಿಗೆ- ಸಹಾಯಕರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಧನ್ಯವಾದಗಳನ್ನು ಅರ್ಪಿಸಿದ್ದೇನೆ. ಮುಕ್ತಾಯ ಸಮಾರಂಭದಲ್ಲಿ ಅತಿಥಿಯಾಗಿ ಶ್ರೀ ಪುಟ್ಟಣ್ಣ, ಮಾನ್ಯ ಶಾಸಕರು, ಕರ್ನಾಟಕ ವಿಧಾನ ಪರಿಷತ್ ಅವರು ಭಾಗವಹಿಸಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ಎಲ್ಲಾ ರೀತಿಯ ಸಹಕಾರ-ಸಹಾಯ ನೀಡುವುದಾಗಿ ಆಶ್ವಾಸನೆ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಕೆ. ಖಾನ್, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪಿ. ಪಳನಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ಎಸ್. ಸತೀಶ್, ಜಿಲ್ಲಾ ಖಜಾಂಚಿ ಶ್ರೀ ಎನ್. ಆನಂದ್ - ಜಿಲ್ಲಾ ಸಹಕಾರ್ಯದರ್ಶಿ ಶ್ರೀ ಎ.ಎಸ್. ಮದುಸೂಧನ್ ಹಾಗೂ ರಾಷ್ಟ್ರೀಯ ಸಂಸ್ಥೆಯ ಮಾಜಿ ನಿರ್ದೇಶಕಿ ಹಾಗೂ ರಾಜ್ಯ ಸಹಾಯಕ ಗೈಡ್ ಆಯುಕ್ತೆ ಶ್ರೀಮತಿ ಪಿ. ಸರೋಜ ಎಲ್ಲಾ ತರಬೇತಿ ಶಿಬಿರಗಳ ಮಾರ್ಗದರ್ಶಿಯಾಗಿ ಕಾರ್ಯನಿರ್ವಹಿಸಿದ್ದು ಎಲ್ಲರಿಗೂ ಅಭಿನಂದನೆ ಸಲ್ಲಿಸಿದ್ದೇನೆ.

ಇತ್ತೀಚಿನ ವರ್ಷಗಳಲ್ಲಿ ಪ್ರಥಮ ಬಾರಿಗೆ ರಾಷ್ಟ್ರೀಯ ತರಬೇತಿ ಸಂಸ್ಥೆ - ಡಾ. ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ದಿನಾಂಕ 27 ಅಕ್ಟೋಬರ್‌ನಿಂದ 31 ರ ವರೆಗೆ ಏರ್ಪಡಿಸಿದ್ದ 109 ನೇ ರೀ ಓರಿಯಂಟೇನ್ ನಾಯಕರ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ದಿನಾಂಕ 30-10-2012 ರಂದು ಭಾಗವಹಿಸಿದ್ದೆ. ಶಿಬಿರದ ನಾಯಕತ್ವವನ್ನು ರಾಷ್ಟ್ರೀಯ ಸಂಸ್ಥೆಯ ಸ್ಕೌಟ್ ವಿಭಾಗದ ಉಪನಿರ್ದೇಶಕರಾದ ಶ್ರೀ ಎಂ.ಎಸ್. ಖುರೇಷಿಯವರು ವಹಿಸಿದ್ದು - ಶಿಬಿರದಲ್ಲಿ ಕರ್ನಾಟಕದಿಂದ 20 ಅಭ್ಯರ್ಥಿಗಳು, ತಮಿಳುನಾಡಿನಿಂದ 10 ಅಭ್ಯರ್ಥಿಗಳು-ಕೇರಳದಿಂದ 9 ಅಭ್ಯರ್ಥಿಗಳು-ಆಂಧ್ರಪ್ರದೇಶದಿಂದ 4 ಅಭ್ಯರ್ಥಿಗಳು - ದಕ್ಷಿಣ ರೈಲ್ವೆಯಿಂದ ಒಬ್ಬರು - ಒಟ್ಟು 43 ಅಭ್ಯರ್ಥಿಗಳು ಭಾಗವಹಿಸಿರುತ್ತಾರೆ. ನಾಯಕರಿಗೆ ಸಹಾಯಕರಾಗಿ ಕೇರಳದಿಂದ ಶ್ರೀ ಜೆ. ಎಡ್ವರ್ಡ್, ತಮಿಳುನಾಡಿನಿಂದ ಶ್ರೀ ಟಿ.ವಿ. ಮೂರ್ತಿ, ಕರ್ನಾಟಕದಿಂದ ಶ್ರೀ ಎಂ. ಪ್ರಭಾಕರಭಟ್ ಮತ್ತು ಶ್ರೀಮತಿ ವನಜಾಕ್ಷಮ್ಮ ಭಾಗವಹಿಸಿದ ಪುನಶ್ಚೇತನ ಶಿಬಿರವನ್ನು ಯಶಸ್ವಿಗೊಳಿಸಿದ್ದಾರೆ. ರಾಜ್ಯದ ಗೌರವ ತರಬೇತಿ ಆಯುಕ್ತರಾಗಿರುವ ಶ್ರೀ ಚಿನ್ನಸ್ವಾಮಿರೆಡ್ಡಿ ಮತ್ತು ಬೆಂಗಳೂರು ದಕ್ಷಿಣ ಜಿಲ್ಲೆಯ ಸಹಕಾರ್ಯದರ್ಶಿ ಶ್ರೀ ಎ.ಎಸ್. ಮದುಸೂದನ್ ಶಿಬಿರವು ಕ್ರಿಯಾತ್ಮಕವಾಗಿ ಜರುಗುವಲ್ಲಿ ಎಲ್ಲ

ಸಹಾಯ –ಸಹಕಾರ ನೀಡಿ ಯಶಸ್ವಿಗೊಳಿಸಿದ್ದಾರೆ. ಶಿಬಿರದ ನಾಯಕರಿಗೂ – ಸಹಾಯಕರಿಗೂ ನಮ್ಮ ರಾಜ್ಯ – ತಮಿಳುನಾಡು– ಕೇರಳ– ಆಂಧ್ರಪ್ರದೇಶ – ದಕ್ಷಿಣ ರೈಲ್ವೆಯಿಂದ ಭಾಗವಹಿಸಿದ ಎಲ್ಲಾ ನಾಯಕರುಗಳು ಮತ್ತು ನಾಯಕಿಯರುಗಳಿಗೆ ರಾಜ್ಯ ಸಂಸ್ಥೆಯ ಅಭಿನಂದನೆ ಸಲ್ಲಿಸಿ ಶುಭಾಶಯ ಕೋರಿದ್ದೇನೆ.

ಈ ವರ್ಷದಲ್ಲಿ 7 ತಿಂಗಳುಗಳು ಮುಗಿದಿವೆ. ಉಳಿದಿರುವ ಐದು ತಿಂಗಳಲ್ಲಿ ನಾವು ಮಾಡಿ ಮುಗಿಸಬೇಕಾಗಿರುವ ಕಾರ್ಯಕ್ರಮಗಳು – ತರಬೇತಿಗಳು ಬಹಳಷ್ಟಿವೆ. ಆದುದರಿಂದ ನಾನು ರಾಜ್ಯದ ನನ್ನ ಎಲ್ಲಾ ಹಂತದ ಸಹೋದ್ಯೋಗಿಗಳಲ್ಲಿ ಮಾಡುವ ಮನವಿ – ದಯಮಾಡಿ ನಿಮ್ಮ ಜಿಲ್ಲೆಗಳಲ್ಲಿ ಡಿ.ಡಿ.ಪಿ.ಐ. ಗಳ ಆದೇಶ ಪಡೆದು ಮೂಲ ತರಬೇತಿ ಶಿಬಿರಗಳನ್ನು ನವೆಂಬರ್ – ಡಿಸೆಂಬರ್ ತಿಂಗಳಲ್ಲಿಯೇ ಮುಗಿಸಲು ಸೂಚಿಸುತ್ತೇನೆ. ಪ್ರತಿವರ್ಷವೂ ವರ್ಷದ ಮೊದಲ ತಿಂಗಳುಗಳಲ್ಲಿ ಸ್ಕೌಟರ್ಸ್ –ಗೈಡರ್ಸ್‌ಗಳ ಹಾಗೂ ವೃಕ್ಷಮಣಿದಾರಿಗಳ ಸಮಾವೇಶ, ಸ್ಥಳೀಯ ಹಾಗೂ ಜಿಲ್ಲಾ ರ್‍ಯಾಲಿಗಳು– ಪ್ರತಿವರ್ಷ ನವೆಂಬರ್ 7 ರಂದು ಆಚರಿಸುತ್ತಿರುವ "ಸಂಸ್ಥಾಪಕರ ದಿನಾಚರಣೆ" (Foundation Day) ಕಾರ್ಯಕ್ರಮಗಳು – ಕಡ್ಡಾಯವಾಗಿ ಪ್ರತಿವರ್ಷ ಆಚರಿಸಬೇಕಾದ ಮೂಲತರಬೇತಿ ಶಿಬಿರಗಳು – ಸ್ಥಳೀಯ – ಜಿಲ್ಲಾ– ರಾಜ್ಯಮಟ್ಟದಲ್ಲಿ ಸರ್ಕಾರದಿಂದ ಆಚರಿಸುವ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ ಆಗಲೇಬೇಕಾದ ಕಾರ್ಯಕ್ರಮಗಳು.

ಸರ್ವಶಿಕ್ಷಣ ಅಭಿಯಾನದ ಮೂಲಕ ಜಿಲ್ಲೆಗಳ ಡಯೆಟ್ ಸಂಸ್ಥೆಗಳು ಹಿಂದಿನ ವರ್ಷಗಳಲ್ಲಿ ಹಣಕಾಸಿನ ನೆರವು ನೀಡಿ ಎಲ್ಲಾ ಜಿಲ್ಲೆಗಳಲ್ಲಿ ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸಲಾಗಿದೆ. ಈ ವರ್ಷದಲ್ಲಿಯೂ ಎಸ್.ಎಸ್.ಎ. ಮತ್ತು ಡಿ.ಎಸ್.ಇ.ಆರ್.ಟಿ. ಗಳ ನೆರವು ಮತ್ತು ಸಹಕಾರದಿಂದ ತರಬೇತಿ ಕಾರ್ಯಕ್ರಮ ನೀಡಲು ನಾವು ಮನವಿ ಸಲ್ಲಿಸಿದ್ದು ಸದ್ಯದಲ್ಲಿ ಸರ್ಕಾರದ ಆದೇಶ ಸಿಗುವ ನಿರೀಕ್ಷೆಯಲ್ಲಿದ್ದೇವೆ.

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಎ.ಎಸ್.ಓ.ಸಿ. – ಡಿ.ಓ.ಸಿ.–ಡಿ.ಓ. ಗಳಿಗೆ ಸೂಚಿಸುವುದೇನೆಂದರೆ ನೀವುಗಳು ಜಿಲ್ಲಾ ಪದಾಧಿಕಾರಿಗಳೊಂದಿಗೆ ತಕ್ಷಣ ವಿಚಾರ ವಿನಿಮಯ ಮಾಡಿ ಜಿಲ್ಲೆಗಳ ಉಪನಿರ್ದೇಶಕರುಗಳ ಹಾಗೂ ಡಯೆಟ್ ಸಂಸ್ಥೆಗಳ ಪ್ರಾಂಶುಪಾಲರುಗಳ ಸಹಾಯ–ಸಹಕಾರ ಮಾರ್ಗದರ್ಶನದೊಂದಿಗೆ ಸುತ್ತೋಲೆ ಹೊರಡಿಸಿ "ನವೆಂಬರ್ – ಡಿಸೆಂಬರ್" ತಿಂಗಳುಗಳೊಳಗಾಗಿ ಮೂಲ ತರಬೇತಿ ಶಿಬಿರಗಳನ್ನು ಕಡ್ಡಾಯವಾಗಿ ಏರ್ಪಡಿಸಿ–ಯಶಸ್ವಿಗೊಳಿಸುವ ಸಂಪೂರ್ಣ ಜವಾಬ್ದಾರಿ ನಿಮ್ಮಗಳ ಮೇಲಿದೆಯೆಂದು ಸೂಚಿಸುತ್ತೇನೆ.

ಹಲವು ಜಿಲ್ಲೆಗಳಲ್ಲಿ ಹೋದ ವರ್ಷವೂ ಮೂಲತರಬೇತಿ ಶಿಬಿರಗಳು ನಡೆಯದಿರುವ ವಿಚಾರ ನನ್ನ ಗಮನಕ್ಕೆ ಬಂದಿದೆ. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳೂ ತಕ್ಷಣ ಈ ಬಗ್ಗೆ ಕಾರ್ಯಪ್ರವೃತ್ತರಾಗಬೇಕಾಗಿ ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# Real and a Very Good Teacher



**Dr. A.P.J. ABDUL KALAM**
Hon'ble Former President of India, New Delhi

I was always fortunate and blessed to have one or two great teachers during every phase of my educational period between 1936 to 1957. Evolution of the oath has resulted from what I have experienced and what I have felt and grown through my teachers. The first oath talks about the teacher loving teaching and teaching being the soul of the teacher. What is the significance of this? Here I would like to give the example of the teacher who really loved teaching.

## Teacher loves teaching

It was the year 1936; I recall my initiation of education at the age of 5 years in Rameswaram Panchayat elementary school. I had a Teacher Muthu Iyer who took special interest on me mainly because I performed very well in a class exercise. He was impressed and next day he came to my house to tell my father that I was a very good student. My parents were happy and got my favourite sweet from my mother. Another important event while I was in first class, which I cannot forget. One day I did not turn up to my school. Teacher Muthu Iyer noticed my absence and same evening he came to my father to ask what the problem was and why did I not go to school and whether he can do anything to help me. On that day, I was having fever. Another important thing, which he noticed was my hand writing, was very poor. He gave a three page writing exercise and told my father that he should ensure that I do the exercise everyday regularly. By these actions of my teacher Muthu Iyer, my father told me in later years that teacher Muthu Iyer is not only a good teacher to me in teaching but he influenced and shaped me with good habits and he was a noble friend to my family. Even today I realize how my teacher loved teaching and took personal interest to bring up his pupils. Now let me talk about another teacher who taught me in my fifth class.

## Teacher encourages questions from Students

I was studying in 5th class at the age of 10 who gave a vision for my life. I had a teacher, Shri Siva Subramania Iyer. He was one of the very good teachers in our school. All of us loved to attend his class and hear him. One day he was teaching about bird's flight. He drew a diagram of a bird on the blackboard depicting the wings, tail and the body structure with the head. He explained how the birds create the lift and fly. He also explained to us how they change direction while flying. Nearly 25 minutes he gave the lecture with various

information such as lift, drag and how the birds fly in a formation of 10, 20 or 30 etc. At the end of the class, he wanted to know whether we understood how the birds fly. I said I did not understand how the birds fly. When I said this, he asked the other students whether they understood or not. Many students said that they did not understand. Our teacher was a real teacher and very good teacher. He did not get upset by our response.

In view of this, my teacher said that he would take all of us to the sea shore. That evening the whole class was in the sea shore. We enjoyed the roaring sea waves knocking at the rocks in the pleasant evening. Birds were flying with sweet chirping voice. He showed the sea birds in formation in 10 to 20 numbers, we have seen the marvelous formation of birds with a purpose and we were all amazed. And we were simply looking at the formation. The teacher showed the birds and asked us to see when the birds fly, what it looked like. We saw the wings being flapped. He explained how the birds flapped the wings to generate the lift. He asked us to look at the tail portion with the combination of flapping wing and twisting tail. We noticed closely and found that the birds in that condition flew in the direction they wanted. Then he asked us a question, where the engine is and how it is powered. Bird is powered by its own life and the motivation what it wants. All these aspects were explained to us within 15 minutes. We all understood the whole bird dynamics with practical example. How nice it was? Our teacher was a great teacher; he could give us a theoretical lesson coupled with live practical example. This is real teaching. I am sure, many of the teachers in schools and colleges will follow this example.

For me, it was not merely an understanding of how a bird flies. The bird's flight entered into me and created a feeling on the seashore of Rameswaram. From that day evening, I thought that my future study has to be with reference to something to do with flight. At that time, I did not realize that I have to go towards flight science. I am telling this because my teacher?s teaching and the event that I witnessed inspired me to lead to the goal in life. Then one evening after the classes, I asked the teacher, "Sir, please tell me, how to progress further something to do with flight". He patiently explained to me that I should complete 8th class, and then go to high school, and then I should go to college that may lead to education of flight. If I do all these things I might do something connected with flight sciences. This advice and the bird flying exercise given by my teacher really gave me a goal and a mission for my life. When I went to college, I took Physics. When I went to engineering in Madras Institute of Technology, I took Aeronautical Engineering.

Thus my life was transformed as a rocket engineer, aerospace engineer and technologist. That one incident of my teacher encouraging me to ask questions, showing the visual examples proved to be a turning point in my life which eventually shaped my profession. Shri Sivasubramania Iyer was an example for shaping not just students but igniting the youth both average and extraordinary by allowing them to ask questions and answering them till they fully understood.

sorce : www.abdulkalam.com

# ರಾಜ್ಯ ವಾರ್ತೆಗಳು

## Observance of Gandhi Jayanthi

**Scouts and Guides participated in the All faith prayer Meeting held on 2nd October 2012**

**The B.B.M.P. organised on All faith Prayer Meeting on 2nd October 2012 in front of Gandhi Statue, Mahatma Gandhi Road, Bangalore. Nearly 100 Scouts and Guides from St. Joseph Girls High School, R.T.C. Girls High School, 15th Kanteerava Scout Group, and Chamundi Scout Group attended the All Faith Prayer Meeting. Sri Venkatesh Murthy, Mayor, B.B.M.P., Sri Rajneesh Goyal, I.A.S., Commissioner B.B.M.P, Sri T. Prabhakar, State Treasurer were present. Smt. P. Saroja, Smt. Gayathri Singh, Sri A.M. Shankar, Smt. Krupa Vijay, Smt. B. Revathi Co-ordinated the All Faith Prayer Meeting.**

## Joti and Jota

**Joti and Jota was held at State Headquarters on 21st October 2012. Supported by LION AJOY from HAM Radio. Around 60 Scouts and Guides participated. Under the Guidelines of Mr.Rajesh, Jota & Joti was held at Shimoga where 50 Scouts and Guides participated. Gokak Local Association of Belgaum District conducted JOTI & JOTA and around 100 Scouts & Guides participated. It was Co-ordinated by Local Association Secretary Mahantesh.**

## ರಾಜ್ಯ ಮಟ್ಟದ ಸಾಹಸಮಯ ಮತ್ತು ತರಬೇತಿ ಸಲಹೆಗಾರರ ತರಬೇತಿ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯಮಟ್ಟದ ಸಾಹಸಮಯ ಮತ್ತು ತರಬೇತಿ ಸಲಹೆಗಾರರ ತರಬೇತಿ ಶಿಬಿರ ದಿನಾಂಕ : 16-10-2012 ರಂದು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ, ಪ್ರಗತಿನಗರ ಉಡುಪಿ ಇಲ್ಲಿ ಜರುಗಿತು. ಇದರ ಉದ್ಘಾಟನೆಯನ್ನು ಸ್ಥಳೀಯ ಕಾಪು ಕ್ಷೇತ್ರದ ಶಾಸಕರಾದ ಮಾನ್ಯ ಶ್ರೀ ಲಾಲಾಜಿ ಆರ್. ಮೆಂಡನ್ ರವರು ನೆರವೇರಿಸಿ ಶಿಕ್ಷಕರನ್ನುದ್ದೇಶಿಸಿ ಮಾತನಾಡಿದರು. ಶಿಕ್ಷಕರು ಸಾಹಸಮಯ ತರಬೇತಿ ಹಾಗೂ ಸ್ಕೌಟಿಂಗ್-ಗೈಡಿಂಗ್ ಸಲಹೆಗಾರರ ತರಬೇತಿ ಪಡೆದು ವಿದ್ಯಾರ್ಥಿಗಳನ್ನು ಯೋಗ್ಯ ವ್ಯಕ್ತಿಗಳಾಗಿ ರೂಪಿಸಲು ಪ್ರಯತ್ನಿಸುತ್ತಿರುವ ಶಿಕ್ಷಕರಿಗೆ ಅಭಿನಂದನೆಗಳನ್ನು ಸಲ್ಲಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರದ ದಾಸ್ತಾನು ಮಳಿಗೆಯನ್ನು ಉದ್ಘಾಟಿಸಿದರು.

ಜಿಲ್ಲಾ ಪಂಚಾಯತ್ ಪ್ರಭಾರ ಅಧ್ಯಕ್ಷರಾದ ಶ್ರೀ ಉಪೇಂದ್ರ ನಾಯಕ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿ ಈ ತರಬೇತಿ ಕೇಂದ್ರ ಡಾ॥ ವಿ.ಎಸ್. ಆಚಾರ್ಯರವರ ಕನಸಿನ ಕೂಸಾಗಿದ್ದು ಇದರ ಅಭಿವೃದ್ಧಿಗೆ ಜಿಲ್ಲಾ ಪಂಚಾಯತ್‌ನಿಂದ ಎಲ್ಲಾ ನೆರವು ನೀಡುವ ಸಂಪೂರ್ಣ ಭರವಸೆ ನೀಡಿದರು. ಶಿಬಿರದ ಅಧ್ಯಕ್ಷತೆಯನ್ನು ಶ್ರೀಮತಿ ಶಾಂತಾ ವಿ. ಆಚಾರ್ಯ, ರಾಜ್ಯ ಆಯುಕ್ತರು(ಗೈಡ್ಸ್) ಇವರು ವಹಿಸಿದ್ದು ಜಿಲ್ಲಾ ತರಬೇತಿ ಕೇಂದ್ರ ಅಭಿವೃದ್ಧಿಗೆ ಎಲ್ಲರ ಸಹಕಾರವನ್ನು ಅಪೇಕ್ಷಿಸಿದರು. ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಶಿಬಿರದ ಮುನ್ನೋಟ ನೀಡಿದರು. ಶ್ರೀ ಕೆ. ಶೇಖರ್ ಪೂಜಾರಿ, ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀಮತಿ ಜಯಮಾಲಿನಿ, ಜಿಲ್ಲಾ ಜಂಟಿ ಕಾರ್ಯದರ್ಶಿ ಧನ್ಯವಾದ ನೀಡಿದರು. ಶ್ರೀ ಬಿ. ಆನಂದ ಅಡಿಗ, ಜಿಲ್ಲಾ ಸ್ಥಾನೀಯ ಆಯುಕ್ತರು(ಸ್ಕೌಟ್ಸ್) ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀ ಪಿ. ದಯಾನಂದ್ ಶೆಟ್ಟಿ, ಜಿಲ್ಲಾ ಹೆಡ್‌ಕ್ವಾಟರ್ಸ್ ಕಮೀಷನರ್ (ಸ್ಕೌಟ್ಸ್) ಶ್ರೀ ಕೆ.ಎಸ್. ಪ್ರತೀಮ್ ಕುಮಾರ್, ಸಾಹಸ ತರಬೇತಿ ಶಿಬಿರದ ನಾಯಕರು, ಶ್ರೀ ಯಂ. ಪ್ರಭಾಕರ ಭಟ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು(ಸ್ಕೌಟ್ಸ್) ಇವರುಗಳು ಉಪಸ್ಥಿತರಿದ್ದರು. ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಂದ 50 ಸ್ಕೌಟ್ಸ್ ಶಿಕ್ಷಕರು ಭಾಗವಹಿಸಿದ್ದರು. ಶ್ರೀ ಜಿಮ್ಮಿ ಸಿಕ್ವೇರಾ, ಶ್ರೀಗೋಪಾಲಕೃಷ್ಣ ಮೈಸೂರು, ಶ್ರೀ ಶಾಂತಾರಾಮ ಪ್ರಭು, ಶ್ರೀ ವಸಂತ್ ಇವರುಗಳು ತರಬೇತುದಾರರಾಗಿ ಭಾಗವಹಿಸಿದ್ದರು.

ಶಿಬಿರಕ್ಕೆ ಉಡುಪಿ ಶಾಸಕರಾದ ಮಾನ್ಯ ಶ್ರೀ ಕೆ. ರಘುಪತಿ ಭಟ್ ಭೇಟಿ ನೀಡಿ ಬೇರೆ ಬೇರೆ ಜಿಲ್ಲೆಗಳಿಂದ ಭಾಗವಹಿಸಿದ ಶಿಬಿರಾರ್ಥಿಗಳಿಗೆ ಉಡುಪಿಯ ಅಭಿವೃದ್ಧಿಯ ಬಗ್ಗೆ ತಿಳಿಸಿ ಮುಂದಿನ ದಿನಗಳಲ್ಲಿ ಕಾರಂತ ಕಲಾಗ್ರಾಮದಲ್ಲಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ಸುಸಜ್ಜಿತ ತರಬೇತಿ ಕೇಂದ್ರ ಸ್ಥಾಪನೆಗೆ ಸರಕಾರದಿಂದ ಎಲ್ಲಾ ಸಹಕಾರ ನೀಡುವ ಬಗ್ಗೆ ಪ್ರಯತ್ನಿಸಲಾಗುವುದೆಂದು ಆಶ್ವಾಸನೆ ನೀಡಿದರು.

# ಜಿಲ್ಲಾ ವಾರ್ತೆಗಳು

## ಚಿತ್ರದುರ್ಗ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ವತಿಯಿಂದ ದಿನಾಂಕ 02-10-2012 ರಂದು 144ನೇ ಮಹಾತ್ಮಾ ಗಾಂಧಿ ಜಯಂತಿ ಹಾಗೂ ಲಾಲ್‌ಬಹದ್ದೂರ್ ಶಾಸ್ತ್ರಿಗಳ ಜನ್ಮದಿನಾಚರಣೆಯ ಪ್ರಯುಕ್ತ ವೀರಸೌಧದಲ್ಲಿ ಸರ್ವ-ಧರ್ಮ ಪ್ರಾರ್ಥನೆಯನ್ನು ಹಾಗೂ ರಕ್ತದಾನ ಶಿಬಿರವನ್ನು ಏರ್ಪಡಿಸಲಾಗಿತ್ತು.

ಸಮಾರಂಭದಲ್ಲಿ ವಿವಿಧ ಧರ್ಮ-ಗ್ರಂಥಗಳಿಂದ ಪಠಣ, ಪ್ರಾರ್ಥನೆ ನಂತರ ಮಹಾತ್ಮ ಗಾಂಧೀಜಿಯವರ ಹಾಗೂ ಶಾಸ್ತ್ರಿಯವರ ಆದರ್ಶ, ಮೌಲ್ಯಗಳನ್ನು ಸ್ಮರಿಸಲಾಯಿತು. 92 ವರ್ಷ ವಯಸ್ಸಿನ ಶ್ರೀ ಡಿ.ಎಸ್. ಚಿದಾನಂದಪ್ಪ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ಗಾಂಧೀಜಿಯವರೊಡನೆ ಹೋರಾಡಿದ ತಮ್ಮ ಅನುಭವಗಳನ್ನು ರಾಷ್ಟ್ರಪಿತನ ಬಗ್ಗೆ ತಿಳಿಸಿಕೊಟ್ಟರು. ಶ್ರೀ ರಾಮಚಂದ್ರಪ್ಪ ನಿವೃತ್ತ ಪ್ರಾಂಶುಪಾಲರು ಸತ್ಯ, ಅಹಿಂಸೆ, ಉತ್ತಮ ಮಾರ್ಗಗಳನ್ನು ಮಕ್ಕಳಿಗೆ ತಿಳಿಸಿದರು. ಶ್ರೀ ಕೃಷ್ಣಮೂರ್ತಿ, ಅಧ್ಯಕ್ಷರು, ಲಯನ್ಸ್ ಕ್ಲಬ್ ಇವರು ಸಮಾರಂಭವನ್ನು ಉದ್ದೇಶಿಸಿ ಮಾತನಾಡಿದರು. ಶ್ರೀ ಕೆ.ಎಸ್. ವಿಜಯ ಡಿ.ಸಿ., ಫಾರ್ ಪೀಸ್ ಇವರು ಪ್ರತಿಜ್ಞೆಯನ್ನು ಶಾಂತಿಗಾಗಿ ಮಕ್ಕಳಿಂದ ಸ್ವೀಕರಿಸಿದರು.

ಶ್ರೀ ಪಿ.ಎಲ್. ಸುರೇಶ್‌ರಾಜ್, ಜಿಲ್ಲಾ ಸ್ಕೌಟ್ ಆಯುಕ್ತರು ತಮ್ಮ ಅಧ್ಯಕ್ಷೀಯ ನುಡಿಯಲ್ಲಿ ಆದರ್ಶ ತತ್ವಗಳನ್ನು ಹಿತವಚನವನ್ನು ನೀಡಿದರು. ಶ್ರೀ ದೇವರಾಜ ಪ್ರಸಾದ, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಚಿತ್ರದುರ್ಗ ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀಮತಿ ಸುಜಯಾ ಪ್ರಕಾಶ್ ರಾಜ್ಯ ಕೇಂದ್ರ ಸ್ಥಾನೀಕ ಆಯುಕ್ತರು ಹಾಗೂ ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು. ಪೋಷಕರು, ಸಾರ್ವಜನಿಕರು, ಸ್ವಾತಂತ್ರ್ಯ ಹೋರಾಟಗಾರರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕಚೇರಿ ಚಿತ್ರದುರ್ಗ ಜಿಲ್ಲೆಯ ವತಿಯಿಂದ ದಿನಾಂಕ 8-10-2012 ರಿಂದ 10-10-2012 ರ ವರೆಗೆ ಚಿನ್ಮೂಲಾದ್ರಿ ಶಾಲೆಯಲ್ಲಿ ಸಿಕ್ಸರ್ಸ್ ಕಬ್ ಮತ್ತು ಬುಲ್ ಬುಲ್ ಶಿಬಿರ, ಬ್ಯಾಡ್ಜ್ ವರ್ಕ್ ತರಬೇತಿ ಶಿಬಿರ, ಸ್ಕೌಟ್ಸ್ ಮತ್ತು ಗೈಡ್ಸ್ ತೃತೀಯ ಸೋಪಾನ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದಲ್ಲಿ 312 ಕಬ್ಸ್ ಬುಲ್ ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್, ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

ಶಿಬಿರದಲ್ಲಿ ಪ್ರವೇಶದಿಂದ ತೃತೀಯ ಸೋಪಾನದ ವರೆಗಿನ ವಿವಿಧ ಕೌಶಲ್ಯಾತ್ಮಕ ತರಬೇತಿಯನ್ನು ವ್ಯವಸ್ಥಿತವಾಗಿ ನೆರವೇರಿಸಲಾಯಿತು. ಸ್ಕೌಟಿಂಗ್ ಮೂಲಭೂತ ತತ್ವಗಳಾದ ಪ್ರತಿಜ್ಞೆ ನಿಯಮ ದಿಕ್ಸೂಚಿ, ಮ್ಯಾಪಿಂಗ್, ಗಂಟುಗಳು, ಪಯೋನಿಯರಿಂಗ್ ಪ್ರಾಜೆಕ್ಟ್, ಶಿಬಿರಾಗ್ನಿ ಮುಂತಾದ ಚಟುವಟಿಕೆಗಳಲ್ಲಿ ತರಬೇತಿ ನೀಡಲಾಯಿತು. ಸರ್ವಧರ್ಮ ಪ್ರಾರ್ಥನೆ. ಸಮುದಾಯ ಸೇವೆ, ಮುಂತಾದ ಚಟುವಟಿಕೆಗಳಲ್ಲಿ ಮಕ್ಕಳು ಆಸಕ್ತಿಯಿಂದ ಭಾಗವಹಿಸಿದ್ದರು. ಶ್ರೀ ಕೇಶವಪ್ಪ, ಶ್ರೀಮತಿ ಸಿ.ಪಿ. ಸುಶೀಲ, ಶ್ರೀಮತಿ ರೀನಾ ವೀರಭದ್ರಪ್ಪ, ಹಾಗೂ ಇತರ ಸ್ಕೌಟರ್ಸ್ - ಗೈಡರ್ಸ್, ಹಾಗೂ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಶ್ರೀ ಮಲ್ಲಯ್ಯ, ಪ್ರಾಂಶುಪಾಲರು, ಡಯಟ್, ಶ್ರೀ ವಿಜಯಕುಮಾರ್, ಪ್ರಾಂಶುಪಾಲರು ಭಾಗವಹಿಸಿ ಹಿತನುಡಿದರು. ಶ್ರೀಮತಿ ಹಸೀನಾ, ಶ್ರೀಮತಿ ಸಿ. ಮಂಜುಳ, ರಾಜ್ಯ ಸಹಾಯಕ ಆಯುಕ್ತರು ಶಿಬಿರದ ಮೇಲುಸ್ತುವಾರಿಗಳಾಗಿದ್ದರು.

# ರಾಯಚೂರು

ದಿನಾಂಕ 02-10-2012 ರಂದು ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ 144ನೇ ಜಯಂತಿ ಉತ್ಸವವನ್ನು ಜಿಲ್ಲಾಡಳಿತ, ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ನಗರ ಸಭೆಯ ಸಂಯುಕ್ತಾಶ್ರಯದಲ್ಲಿ ಆಚರಿಸಲಾಯಿತು.

ನಗರದ ಜಿಲ್ಲಾ ಕ್ರೀಡಾಂಗಣದ ಆವರಣದಲ್ಲಿ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ ಜನ್ಮ ದಿನಾಚರಣೆಯ ಕಾರ್ಯಕ್ರಮವನ್ನು ಮಾನ್ಯ ಜಿಲ್ಲಾಧಿಕಾರಿ ಶ್ರೀಮತಿ ಎಂ.ವಿ. ಸಾವಿತ್ರಿ, ಭಾ.ಆ.ಸೇ. ಉದ್ಘಾಟಿಸಿದರು. ನಂತರ ಗಾಂಧೀಜಿಯವರ ಪುತ್ಥಳಿಗೆ ಜಿಲ್ಲಾಧಿಕಾರಿ ಹಾಗೂ ನಗರ ಸಭೆ ಅಧ್ಯಕ್ಷೆ ಶ್ರೀಮತಿ ಮಮತಾ ಸುಧಾಕರ್, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಎಸ್.ಬಿ. ಬಿಸ್ನಳ್ಳಿ, ಸಹಾಯಕ ಆಯುಕ್ತರಾದ ಶ್ರೀಮತಿ ಎನ್. ಮಂಜುಶ್ರೀ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ, ಉಪನಿರ್ದೇಶಕರಾದ ಶ್ರೀ ಬಿ.ಎಸ್. ಪರಮೇಶ, ಬಿ.ಇ.ಓ., ಶ್ರೀ ಮಲ್ಲಿಕಾರ್ಜುನ್, ವಯಸ್ಕರ ಶಿಕ್ಷಣಾಧಿಕಾರಿ, ಶ್ರೀಮತಿ ಆರ್. ಇಂದಿರಾ ಮತ್ತಿತರ ಅಧಿಕಾರಿಗಳು ಹೂಮಾಲೆ ಹಾಕಿ ಗೌರವ ಸಲ್ಲಿಸಿದರು. ಆನಂತರ ಸ್ಕೌಟ್ಸ್-ಗೈಡ್ಸ್‌ಗಳು ಸರ್ವಧರ್ಮ ಪ್ರಾರ್ಥನೆ ಸಲ್ಲಿಸಿ ರಾಷ್ಟ್ರಪಿತನಿಗೆ ಗೌರವ ಸಲ್ಲಿಸಿದರು.

ಇದಾದ ನಂತರ ಸ್ಕೌಟ್ಸ್-ಗೈಡ್ಸ್‌ಗಳು ಶ್ರಮದಾನ ಮಾಡಿ ಜಿಲ್ಲಾ ಸಂಸ್ಥೆಯ ಹಾಗೂ ಕೆ.ಇ.ಬಿ. ಶಾಲೆಯ ಸುತ್ತ-ಮುತ್ತಲಿನ ಆವರಣವನ್ನು ಸ್ವಚ್ಛಗೊಳಿಸಿದರು. ನಂತರ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ನಗರಸಭೆಯ ವತಿಯಿಂದ ಉಪಹಾರ ಮತ್ತು ಸಿಹಿ ನೀಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಶ್ರೀಮತಿ ಅಜೀಜಾ ಸುಲ್ತಾನ ಡಿ.ಸಿ. (ಗೈಡ್ಸ್) ಶ್ರೀ ಅಮರೇಗೌಡ ಪಾಟೀಲ, ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಕೋಶಾಧಿಕಾರಿ ಶ್ರೀ ಎಸ್. ಗೋವಿಂದರಾಜು, ಅಧ್ಯಕ್ಷರು, ಸ್ಥಳೀಯ ಸಂಸ್ಥೆ ಶ್ರೀ ಆರ್. ಹೆಚ್. ಸಾಗರ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಶ್ರೀ ಎಂ. ಶೇಖರ, ಡಿ.ಟಿ.ಸಿ.(ಎಸ್) ಶ್ರೀ ರಾವುತ್ ರಾವ್ ಬರೂರ. ಡಿ.ಓ.ಸಿ. ಹಾಗೂ ಇತರರು ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಸರ್ವಧರ್ಮ ಪ್ರಾರ್ಥನೆಗೆ ಸಂಗೀತವನ್ನು ಶ್ರೀ ತಿಮ್ಮಪ್ಪ ಸ್ಕೌ.ಮಾ. ನೀಡಿದರು. ಸರ್ವಧರ್ಮ ಪ್ರಾರ್ಥನೆಯಲ್ಲಿ ಲಯನ್ಸ್ ಶಾಲೆ, ಸೆಂಟ್ ಮೇರಿಸ್ ಕಾನ್ವೆಂಟ್, ಕೆ.ಇ.ಬಿ. ಶಾಲೆ, ಕೆ.ಪಿ.ಸಿ.ಎಲ್., ಡಿ.ಎ.ವಿ. ಶಕ್ತಿನಗರ ಶಾಲೆ. ಟ್ಯಾಗೂರ್ ಸರ್ಕಾರಿ ಪ್ರೌಢಶಾಲೆ, ಬಸವ ವಿದ್ಯಾ ನಿಕೇತನ ಶಾಲೆಯ 150 ಸ್ಕೌಟ್ಸ್ -ಗೈಡ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ 29-09-2012 ರಂದು ಕೆ.ಪಿ.ಸಿ.ಎಲ್., ಡಿ.ಎ.ವಿ., ಪಬ್ಲಿಕ್ ಶಾಲೆ, ಶಕ್ತಿನಗರ ಶಾಲಾ ಮೈದಾನದಲ್ಲಿ ಸ್ವಾಮಿ ವಿವೇಕಾನಂದ ಸ್ಕೌಟ್ ಘಟಕದ ಹಾಗೂ ರಾಣಿಚನ್ನಮ್ಮ ಗೈಡ್ ಕಂಪನಿಯ ಸದಸ್ಯರುಗಳಿಗೆ ದೀಕ್ಷಾ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮಕ್ಕೆ ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು (ಗೈಡ್ಸ್) ಹಾಗು ಶ್ರೀ ರಾವುತ್‌ರಾವ್ ಬರೂರ, ಡಿ.ಓ.ಸಿ., ಇವರನ್ನು ಮುಖ್ಯ ಅತಿಥಿಗಳಾಗಿ ಆಹ್ವಾನಿಸಲಾಗಿತ್ತು. ಸ್ಕೌಟ್ ಮಾಸ್ಟರ್‌ರಾದ ಶ್ರೀ ಕುಮಾರ ಮಾನೆ, ಶ್ರೀ ಶರತ್ ಕುಮಾರ್, ಸ್ಕೌಟ್‌ಗಳಿಗೆ ಪ್ರತಿಜ್ಞೆ ಹೇಳುವ ಮುಖಾಂತರ ಅವರಿಗೆ ದೀಕ್ಷೆಯನ್ನು ನೀಡಲಾಯಿತು. ಶಾಲೆಯ ಪ್ರಾಂಶುಪಾಲರಾದ ಶ್ರೀ ರಾಮರೆಡ್ಡಿ ಹಾಗೂ ಉಪ ಪ್ರಾಂಶುಪಾಲರಾದ ಶ್ರೀ ಅಂಗಡಿಯವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ಕಾರ್ಫ್ ಮತ್ತು ಕ್ಯಾಪ್‌ಗಳನ್ನು ಹಾಕುವ ಮೂಲಕ ಶುಭ ಹಾರೈಸಿದರು.

ಗೈಡ್ ವಿಭಾಗದ ನಾಯಕಿಯಾದ ಶ್ರೀಮತಿ ನರೀನ್ ಗೈಡ್ಸ್‌ಗಳಿಗೆ ಪ್ರತಿಜ್ಞೆ ಬೋಧಿಸಿ ಪ್ರವೇಶ ಪದಕನೀಡಿದರು. ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು (ಗೈಡ್ಸ್) ಸ್ಕಾರ್ಫ್ ತೊಡಿಸಿ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಶಾಲೆಯ ಶಿಕ್ಷಕ/ಶಿಕ್ಷಕಿಯರು ಪಾಲ್ಗೊಂಡಿದ್ದರು.

ದಿನಾಂಕ 05-10-2012 ರಿಂದ 07-10-2012 ರ ವರೆಗೆ ಸರಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆ ಹುಡಾದಲ್ಲಿ ವಿವೇಕಾನಂದ ಸ್ಕೌಟ್ಸ್ ಮತ್ತು ಗೈಡ್ಸ್ ತಂಡದವರಿಂದ (ದಳ) "ಸಮುದಾಯ ಅಭಿವೃದ್ಧಿ" ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಮೂರು ದಿನಗಳ ಕಾಲ ಸ್ಕೌಟ್ಸ್-ಗೈಡ್ಸ್‌ಗಳು ಅನುಭವದ ಮೂಲಕ ಸಾಕಷ್ಟು ವಿಷಯ ಕಲಿತರು. ಮೊದಲನೇ

ದಿನ ಶಾಲಾ ಆವರಣದಲ್ಲಿ ಎಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಗಂಟುಗಳ ಬಗ್ಗೆ ಅಧ್ಯಯನ ಮಾಡಿದರು ಹಾಗೂ ಪ್ರಾಯೋಗಿಕವಾಗಿ ತಿಳಿದುಕೊಂಡರು. ಎರಡನೆಯ ದಿನ ಗುಡಾರ ಹಾಕುವ ಕಲೆಯನ್ನು ಕಲಿತು ತಾವೇ ಗುಡಾರ ಹಾಕಿಕೊಂಡು, ಶಿಬಿರವಾಸ, ಗುಡಾರ ಜೀವನಕ್ಕೆ ಮುಂದಾದರು. ಹಾಗೂ ಮೂರನೆಯ ದಿನ ಮಹತ್ವದ ಹೊರಸಂಚಾರ ಕಾರ್ಯಕ್ರಮವನ್ನು ಹುಡಾದಿಂದ 5 ಕೀ.ಮೀ. ದೂರದಲ್ಲಿರುವ ಮುಕ್ಕುಂದಾದ ಶ್ರೀ ಅನ್ನಪೂರ್ಣೇಶ್ವರಿ ದೇವಸ್ಥಾನಕ್ಕೆ ಏರ್ಪಡಿಸಿದ್ದರು. ಅದರಂತೆ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳು ಕಾಲು ನಡಿಗೆಯಲ್ಲಿ ದೇವಸ್ಥಾನ ತಲುಪಿ, ಗುಡಾರ ಹಾಕಿಕೊಂಡು ದೇವಸ್ಥಾನದ ಸುತ್ತ ಮುತ್ತ ಸ್ವಚ್ಛ ಮಾಡಿದರು ಮತ್ತು ದೇವಸ್ಥಾನದ ಐತಿಹಾಸಿಕ ಮಹತ್ವ ತಿಳಿದು ಆನಂದಿಸಿದರು.

ದಿನಾಂಕ 02-10-2012 ರಂದು ಸರಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆ ಹುಡಾದಲ್ಲಿ ಮಹಾತ್ಮ ಗಾಂಧೀಜಿಯವರ 144ನೇ ಜಯಂತಿಯನ್ನು ವಿವೇಕಾನಂದ ಸ್ಕೌಟ್ಸ್ ಮತ್ತು ಗೈಡ್ಸ್, ಕಬ್ಸ್, ಬುಲ್ ಬುಲ್ಸ್ ತಂಡದವರಿಂದ ಹಮ್ಮಿಕೊಳ್ಳಲಾಗಿತ್ತು. ಜಯಂತಿಯ ಸಮಯದಲ್ಲಿ ತಂಡದ ಎಲ್ಲಾ ಸದಸ್ಯರು ಸಾಮೂಹಿಕ "ಸರ್ವಧರ್ಮ ಪ್ರಾರ್ಥನೆ" ಮಾಡುವ ಮೂಲಕ ಗಾಂಧೀಜಿಯವರ ಆತ್ಮಕ್ಕೆ ಶಾಂತಿ ಕೋರಿದರು. ಈ ಸಂದರ್ಭದಲ್ಲಿ ಕಾರ್ಯಕ್ರಮದಲ್ಲಿ ಮುಖ್ಯ ಗುರುಗಳಾದ ಶ್ರೀ ಕೃಷ್ಣಯ್ಯ. ಸಹಶಿಕ್ಷಕರುಗಳಾದ ಕು|| ಮಹಾಂತೇಶ ಕಂಚಿ, ಕು|| ಸಂತೋಷ ಜಿ. ಕು|| ಹುಸೇನಸಾಬ, ಕು|| ಪಂಪಾಪತಿ ಹಾಗು ಸ್ಕೌಟ್ಸ್ ಮಾಸ್ಟರ್ ಶ್ರೀರವಿ ಅಂತರವಳ್ಳಿ ಹಾಜರಿದ್ದರು.

## ಮೈಸೂರು

ದಿನಾಂಕ : 02-08-2012 ರಂದು ಬೆಳಗ್ಗೆ 10.00 ಗಂಟೆಯಿಂದ ಸಾಯಂಕಾಲ 5 ಗಂಟೆಯವರೆಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್ ಮತ್ತು ಗೈಡ್ಸ್ ಭವನದಲ್ಲಿ, ಮೈಸೂರಿನಲ್ಲಿ ಸ್ಕೌಟರ್ಸ್ / ಗೈಡರ್ಸ್ ಸಮಾವೇಶ ಜರುಗಿತು. 62 ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು. ಶ್ರೀಮತಿ ಶಾಂತಗಿರಿಯಣ್ಣ ಶ್ರೀ ವಿ.ಎಂ. ರಾಮಚಂದ್ರ, ಶ್ರೀ ಪಿ. ನನ್ನೇಶ, ಶ್ರೀ ಅಮರ್‌ನಾಥ್, ಶ್ರಿ ಬಾಲಕೃಷ್ಣ, ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಡಾ|| ಕೆ.ಬಿ. ಗುರುಮೂರ್ತಿ, ರಾಜ್ಯ ಸಹಾಯಕ ಆಯುಕ್ತರು ಡಾ|| ಪಿ.ವಿ. ರತ್ನೆ ಅರಸ್, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಪಿ. ವಿಶ್ವನಾಥ್ ಉದ್ಘಾಟನಾ ಹಾಗೂ ಮುಕ್ತಾಯ ಸಮಾರಂಭಗಳಲ್ಲಿ ಭಾಗವಹಿಸಿದ್ದರು.

ದಿನಾಂಕ 04-08-2012 ರಂದು ಶ್ರೀ ಮಹಾರಾಜ ಪ್ರಥಮ ದರ್ಜೆ ಕಾಲೇಜು, ಮೈಸೂರಿನಲ್ಲಿ ರೋವರ್ ಕ್ರ್ಯೂ ಉದ್ಘಾಟನೆ ಕಾರ್ಯಕ್ರಮವನ್ನು ಶ್ರೀ ಪಿ. ವಿಶ್ವನಾಥ್, ಡಿ.ಸಿ.ಸಿ., ರವರು ನೆರವೇರಿಸಿದರು. ಶ್ರೀ ಜಿ.ಎನ್. ಚನ್ನಬಸಪ್ಪ, ಹೆಡ್ ಕ್ವಾರ್ಟರ್ಸ್ ಕಮೀಷನರ್, ಡಾ|| ಕಮಲಾರಾಮನ್, ಡಿ.ಸಿ.(ಜಿ) ಶ್ರೀ ಅಮರನಾಥ್ ಎಸ್.ಎಂ. ಶ್ರೀ ವಿ. ಎಂ. ರಾಮಚಂದ್ರ, ಡಿ.ಓ.ಸಿ.(ಎಸ್) ಶ್ರೀ ಬಾಲಕೃಷ್ಣ ರವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಶ್ರೀ ಪ್ರಭಾಕರ್, ಪ್ರಾಂಶುಪಾಲರು, ಅಧ್ಯಕ್ಷತೆ ವಹಿಸಿದ್ದರು. ಶ್ರೀ ಪಿಂಟೋ, ಸ್ವಾಗತ ವಂದನೆ ನಡೆಸಿದರು. 100 ರೋವರ್ಸ್‌ಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

ದಿನಾಂಕ 11-08-2012 ರಂದು ನಂಜನಗೂಡು ತಾಲ್ಲೂಕಿನ ಸುಮಾರು 40 ಕ್ಲಸ್ಟರ್ ಶಿಕ್ಷಕ/ಶಿಕ್ಷಕಿಯರಿಗೆ ಶ್ರೀ ವಿ.ಎಂ. ರಾಮಚಂದ್ರ, ಡಿ.ಓ.ಸಿ., ಶ್ರೀ ಪಿ. ನನ್ನೇಶ, ಡಿ.ಓ.ಸಿ., ರವರು ರಾಷ್ಟ್ರಧ್ವಜದ ಹುಟ್ಟು ಬೆಳವಣಿಗೆ, ಹಾಗೂ ಕಟ್ಟಿ ಹಾರಿಸುವ ವಿಧಾನವನ್ನು ತಿಳಿಯಪಡಿಸಿದರು. ನಂಜನಗೂಡಿನ ಇನ್ನರ್ ವೀಲ್ ಸಂಸ್ಥೆಯವರ ಸಹಕಾರದಲ್ಲಿ ಈ ಕಾರ್ಯಕ್ರಮ ಜರುಗಿತು.

ದಿನಾಂಕ 15-08-2012 ರಂದು ಶ್ರೀ ಚಾಮುಂಡಿ ವಿಹಾರದಲ್ಲಿ ಜರುಗಿದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ನಿರ್ಮಲ ಪ್ರಾಥಮಿಕ ಶಾಲೆ ಜಯಲಕ್ಷ್ಮೀಪುರ ಗೈಡ್ಸ್ ಶ್ರೀ ವಿದ್ಯಾವಿಕಾಸ ಪ್ರಾಥಮಿಕ ಶಾಲೆ, ಬನ್ನೂರು ರಸ್ತೆ, ಸ್ಕೌಟ್ಸ್‌ಗಳು ಭಾಗವಹಿಸಿದ್ದರು. ಶ್ರೀ ವಿ.ಎಂ. ರಾಮಚಂದ್ರ ಡಿ.ಓ.ಸಿ., (ಎಸ್) ರವರ ನೇತೃತ್ವದಲ್ಲಿ ಶ್ರೀಮತಿ ಸಂಪತ್ ಕುಮಾರಿ, ಶ್ರೀ ರಾಘವೇಂದ್ರ, ಸ್ಕೌಟ್ ಮಾಸ್ಟರ್ ರವರು ಭಾಗವಹಿಸಿದ್ದರು. ಗೈಡ್ ವಿಭಾಗದ ಪಥಚಲನಕ್ಕೆ ತೃತೀಯ ಬಹುಮಾನ ಲಭಿಸಿತು.

ಮೈಸೂರು ದಕ್ಷಿಣ ವಲಯದವರುಲ್ಬಾಲ್ಯೋಧ್ಯಾನ ಶಾಲೆಯಲ್ಲಿ ಸ್ವಾತಂತ್ರ್ಯ ದಿನಾಚರಣೆ ಆದರಿಸಲಾಯಿತು. ಶ್ರೀ ವಿ.ಎಂ. ರಾಮಚಂದ್ರ, ಡಿ.ಓ.ಸಿ.(ಎಸ್) ಶ್ರೀಮತಿ ಸುಜಯ, ಜಂಟಿ ಕಾರ್ಯದರ್ಶಿಯವರು ಭಾಗವಹಿಸಿದ್ದರು.

ದಿನಾಂಕ : 31-08-2012 ರಂದು ಜಿಲ್ಲಾ ಸ್ಕೌಟರ್ಸ್, ಗೈಡರ್ಸ್ ಸಮಾವೇಶ ಜರುಗಿತು. ಈ ಸಮಾವೇಶದಲ್ಲಿ ಟಿ. ನರಸೀಪುರ ನಂಜನಗೂಡು, ಹೆಗ್ಗಡದೇವನ ಕೋಟೆ, ಹುಣಸೂರು, ಪಿರಿಯಾಪಟ್ಟಣ, ಕೆ.ಆರ್.ನಗರ, ತಾಲ್ಲೂಕುಗಳ ಸುಮಾರು 60 ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು. ಡಾ॥ ಪಿ.ವಿ. ರತ್ನೆ ಅರಸ್, ಎ.ಎಸ್.ಸಿ.(ಜಿ), ಡಾ॥ ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿ, ಡಾ॥ ಕಮಲಾರಾಮನ್, ಡಿ.ಸಿ.(ಜಿ) ಶ್ರೀ ಅಬ್ದುಲ್ ಜಮೀಲ್, ಡಿ.ಸಿ.(ಎಸ್) ರವರುಗಳು ಉದ್ಘಾಟನೆ, ಮುಕ್ತಾಯ ಸಮಾರಂಭಗಳಲ್ಲಿ ಭಾಗವಹಿಸಿ ಹಿತನುಡಿ ನುಡಿದರು. ಶ್ರೀ ವಿ.ಎಂ. ರಾಮಚಂದ್ರ, ಶ್ರೀ ಮಹಾದೇವಯ್ಯ, ಶ್ರೀಮತಿ ಶಾಂತಗಿರಿಯಣ್ಣ, ಶ್ರೀಮತಿ ರಾಧಮ್ಮ, ಶ್ರೀಮತಿ ಎಂ.ಎನ್. ನಾಗರತ್ನಮ್ಮ ಶ್ರೀಮತಿ ಅಮೃತಮ್ಮ, ಶ್ರೀ ಡಿ. ಷರಾಫ್ ಮಾದಪ್ಪ ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

ಮೈಸೂರು ದಕ್ಷಿಣ ವಲಯದ ಸ್ಥಳೀಯ ಸಂಸ್ಥೆಯ ವತಿಯಿಂದ ದಿನಾಂಕ 02-10-2012 ರಂದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ 144ನೇ ಜನ್ಮ ಜಯಂತಿ ಹಾಗೂ ಲಾಲ್‌ಬಹದದೂರ್ ಶಾಸ್ತ್ರಿಯವರ 108ನೇ ಜನ್ಮ ಜಯಂತಿಯ ಕಾರ್ಯಕ್ರಮವನ್ನು ಶ್ರೀ ಟಿ. ಸುಬ್ಬಣ್ಣ ನವರ ಸಾರ್ವಜನಿಕ ಶಾಲೆಯಲ್ಲಿ ಆಯೋಜಿಸಲಾಗಿತ್ತು. ಸಮಾರಂಭದ ಮುಖ್ಯ ಅತಿಥಿಯಾಗಿ ಶ್ರೀ ಆರ್. ಬಾಬುರಾವ್ ರವರು ಶ್ರೀ ವಿ.ಎಂ. ರಾಮಚಂದ್ರರವರು ಆಗಮಿಸಿದ್ದರು ಅಧ್ಯಕ್ಷತೆಯನ್ನು ಶಾಲೆಯ ಮುಖ್ಯ ಶಿಕ್ಷಕರು ಹಾಗು ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಆದ ಶ್ರೀ ಹೆಚ್.ಎಸ್. ಗುರುರಾಜ್ ರವರು ವಹಿಸಿದ್ದರು. "ಸರ್ವಧರ್ಮ ಪ್ರಾರ್ಥನೆಯ ಕಾರ್ಯಕ್ರಮವನ್ನು ಸ್ಕೌಟ್ಸ್-ಗೈಡ್ಸ್‌ಗಳು ವೈಶಿಷ್ಟ್ಯಪೂರ್ಣವಾಗಿ ನಡೆಸಿಕೊಟ್ಟರು. ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಬಾಲಕೃಷ್ಣ ಡಿ. ಮತ್ತು ಶ್ರೀ ಎಂ.ವಿ. ಅಮರ್‌ನಾಥ್ ಸಹ ಉಪಸ್ಥಿತರಿದ್ದರು. ಒಟ್ಟಾಗಿ 262 ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ಶಿಕ್ಷಕ/ಶಿಕ್ಷಕಿಯರು ಕಾರ್ಯಕ್ರಮದಲ್ಲಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ದಿನಾಂಕ 12-09-2012 ರಂದು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಜಿಲ್ಲಾ ಪದಕ ಸಮಿತಿ ಸಭೆ ಡಾ॥ ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಯವರ ಮಾರ್ಗದರ್ಶನದಲ್ಲಿ ನಡೆಯಿತು 2012-13 ನೇ ವರ್ಷಕ್ಕಾಗಿ ಪದಕ ಪರೀಕ್ಷಕರನ್ನು ನೇಮಕಗೊಳಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಪಿ. ವಿಶ್ವನಾಥ್, ಡಿ.ಸಿ.ಸಿ., ರವರು ಉಪಸ್ಥಿತರಿದ್ದರು. ಎಲ್ಲಾ ವಿಭಾಗದವರು ಹಾಜರಿದ್ದರು.

ದಿನಾಂಕ 27-09-2012 ರಂದು ಸ್ಕೌಟ್-ಗೈಡ್‌ನ ಮಾಹಿತಿ ಶಿಬಿರವನ್ನು ಬೆಳಗ್ಗೆ 10 ಗಂಟೆಯಿಂದ ಸಾಯಂಕಾಲ 4 ಗಂಟೆಯವರೆಗೆ ಜಿಲ್ಲಾ ಪಂಚಾಯತ್ ಸಭಾಂಗಣದಲ್ಲಿ, ಜಿಲ್ಲಾ ಪಂಚಾಯತ್ ಮತ್ತು ಭಾ. ಸ್ಕೌ. ಗೈ. ಮೈಸೂರು ಜಿಲ್ಲಾ ಸಂಸ್ಥೆ ಸಹಯೋಗದಲ್ಲಿ ಸ್ಕೌಟ್ಸ್-ಗೈಡ್ಸ್‌ನ ಮಾಹಿತಿ ಶಿಬಿರ ಜರುಗಿತು.

127 ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು 4 ಕಾರ್ಯನಿರ್ವಾಹಕಾಧಿಕಾರಿಗಳು ಹಾಗೂ ಇನ್ನಿತರ ಹಿರಿಯ ಅಧಿಕಾರಿಗಳು ಸೇರಿ ಸುಮಾರು 150 ಅಧಿಕಾರಿಗಳು ಸಮಾವೇಶದಲ್ಲಿ ಭಾಗವಹಿಸಿದ್ದರು. ಎಲ್ಲಾ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಸಹ ಭಾಗವಹಿಸಿದ್ದರು. ಭಾಗವಹಿಸಿದ್ದ ಪಿಡಿಓ ಗಳಲ್ಲಿ ತಾಲ್ಲೂಕಿಗೆ ಒಬ್ಬರಂತೆ ತಮ್ಮ ಅನಿಸಿಕೆಯಲ್ಲಿ ಇಂತಹ ಕಾರ್ಯಕ್ಕೆ ಗ್ರಾಮಪಂಚಾಯತಿ ವತಿಯಿಂದ ರೂ 2,000 ನ್ನು ತಪ್ಪದೇ ಒಂದು ವಾರದೊಳಗಡೆ ನೀಡುತ್ತೇವೆಂದು ಆಶ್ವಾಸನೆ ನೀಡಿದರು. ಮಾಹಿತಿ ಶಿಬಿರ ಯಶಸ್ವಿಯಾಗಿ ಜರುಗಿತು.

ದಿನಾಂಕ : 13-09-2012 ರಿಂದ 15-09-2012 ರ ವರೆಗೆ ಅಖಿಲ ಭಾರತ ರೈಲ್ವೆ 32ನೇ ಕಬ್ ಬುಲ್ ಬುಲ್ಸ್ ಉತ್ಸವದಲ್ಲಿ ವಿಜಯ ವಿಠಲ ಓಪನ್ ಕಬ್ ಪ್ಯಾಕ್, ಮೈಸೂರಿನವರು ಭಾಗವಹಿಸಿದ್ದರು. ಶ್ರೀಮತಿ ಅಮೃತಮ್ಮ, ಎ.ಎಲ್.ಟಿ.(ಸಿ.) ಶ್ರೀಮತಿ ಎಂ.ಎನ್. ನಾಗರತ್ನಮ್ಮ ಎ.ಎಲ್.ಟಿ. (ಬಿ.) ಪರೀಕ್ಷಕರಾಗಿ, ಮತ್ತು ಶ್ರೀಮತಿ ಸುಜಯ ಮತ್ತು ಶ್ರೀಮತಿ ಶಾಂತಗಿರಿಯಣ್ಣ, ಎಲ್.ಟಿ.(ಜಿ.) ರವರು ಭಾಗಿಯಾಗಿದ್ದರು. 10 ಕಬ್ಸ್‌ಗಳು ಭಾಗವಹಿಸಿದ್ದರು.

## ಧಾರವಾಡ

ದಿನಾಂಕ 2-10-2012 ಹುಬ್ಬಳ್ಳಿ ಗೋಕುಲ್ ರಸ್ತೆಯಲ್ಲಿರುವ ಓರಿಯಂಟಲ್ ಪಬ್ಲಿಕ್ ಶಾಲೆಯಲ್ಲಿ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಹಾಗೂ ಮಾಜಿ ಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರೀ ರವರ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ 144ನೆಯ ಗಾಂಧೀ ಜಯಂತಿಯನ್ನು ಆಚರಿಸಲಾಯಿತು. ಶಾಲೆಯ ಸ್ಕೌಟ್ಸ್-ಗೈಡ್ಸ್ ಮಕ್ಕಳು 'ಸರ್ವಧರ್ಮ ಪ್ರಾರ್ಥನೆ' ಮೂಲಕ ಭಕ್ತಿಭಾವ ಹಾಗು ಸದ್ಭಾವನೆಯ ಸಂದೇಶವನ್ನು ಸಾರಿದರು. ಶಾಲಾ ಪ್ರಾಚಾರ್ಯರು ಹಾಗೂ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ರಾಜೇಶ್ವರಿ ಕೃಷ್ಣಾ, ಪ್ರಧಾನ ಗುರು ಮಾತೆ ಹಾಗೂ ಶಾಲೆಯ ಮಕ್ಕಳು ಹಾಜರಿದ್ದರು. ಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ನಿರ್ಮಲಾ ದೈಹಿಕ ಹಾಗೂ ಸ್ಕೌಟ್ ಶಿಕ್ಷಕ ಶ್ರೀ ಪಾರಥಾ ಹಾಗೂ ಶ್ರೀ ಚಂದ್ರಶೇಖರ್, ಹಾಗೂ ಮಕ್ಕಳು ಪುಷ್ಪಾಂಜಲಿ ಅರ್ಪಿಸಿ, ಪೂಜೆ ಸಲ್ಲಿಸಿದರು. ಕಬ್ ನಾಯಕರಾದ ಶ್ರೀ ಎಸ್.ಎಸ್. ಹುಸೇನಿ ಕಾರ್ಯಕ್ರಮದಲ್ಲಿ ಮಾರ್ಗದರ್ಶನ ನೀಡಿದರು.

## ಬೀದರ್

ದಿನಾಂಕ : 17-09-2012 ರಂದು ಹೈದ್ರಾಬಾದ-ಕರ್ನಾಟಕ ವಿಮೋಚನಾ ದಿನಾಚರಣೆಯನ್ನು ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಡಿ.ಡಿ.ಪಿ.ಐ., ಕಛೇರಿಯಲ್ಲಿ ಆಚರಿಸಿ, ಡಿ.ಸಿ. ಕಛೇರಿ ನಂತರ ನಗರದ ಪ್ರಮುಖ ರಸ್ತೆಗಳಲ್ಲಿ ಮೆರವಣಿಗೆಯನ್ನು ಏರ್ಪಡಿಸಲಾಗಿತ್ತು. ನಂತರ ನೆಹರು ಕ್ರೀಡಾಂಗಣದ ಪಥಚಲನೆಯಲ್ಲಿಯೂ ಸಹ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಇದರಲ್ಲಿ ಶ್ರೀ ರಾಚಯ್ಯನಾಶಿ, ಕಾರ್ಯದರ್ಶಿ ಸ್ಥಳೀಯ ಸಂಸ್ಥೆ, ಬೀದರ್ ಹಾಗೂ ರೋವರ್ಸ್‌ಗಳು ಭಾಗವಹಿಸಿದ್ದರು. ಇವೆಲ್ಲವುಗಳ ನೇತೃತ್ವವನ್ನು ಶ್ರೀ ಎ.ಎಸ್. ಶಿವುಕುಮಾರ್ ಎ.ಎಸ್.ಓ.ಸಿ.(ಎಸ್.) ವಹಿಸಿದ್ದರು.

ದಿನಾಂಕ 07-09-2012 ರಿಂದ 09-09-2012 ರವರೆಗೆ ಬ್ಯಾಡ್ಜ್ ವರ್ಕ್ ಶಿಬಿರವನ್ನು ಗೊಟಮಗೊಟ್ಟಿಯಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ ಶ್ರೀ ಬಾಬುರಾವ್ ನಿಂಬೂರೆ, ಎ.ಎಲ್.ಟಿ.(ಎಸ್.), ನಾಯಕರಾಗಿದ್ದರು. ರಾಜ್ಯ ಪುರಸ್ಕಾರದ ವರೆಗಿನ ಪದಕಗಳನ್ನು ಹೇಗೆ ಗಳಿಸಬೇಕು ಹಾಗು ವಿಧಿ ವಿಧಾನಗಳನ್ನು ಸ್ಕೌಟ್ಸ್-ಗೈಡ್ಸ್‌ಗಳಿಗೆ ಪಾಠ ಪ್ರವಚನದೊಂದಿಗೆ ಬೋಧಿಸಲಾಯಿತು. ಈ ಶಿಬಿರಕ್ಕೆ 125 ಸ್ಕೌಟ್ಸ್-ಗೈಡ್ಸ್‌ಗಳು, ರೋವರ್ಸ್‌ಗಳು, ಶ್ರೀ ರಾಚಯ್ಯ ನಾಶಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ, ಬೀದರ್, ಶ್ರೀ ಶಿವಕುಮಾರ ಹಾಲಳ್ಳಿ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಔರಾದ, ಶ್ರೀಮತಿ ವಂದನಾ, ಗೈಡ್ ಕ್ಯಾಪ್ಟನ್, ಸ್ಕೌಟ್ ಮಾಸ್ಟರುಗಳಾದ ಶ್ರೀ ಹೆಚ್. ಸುರೇಶ, ಶ್ರೀ ಸತೀಶ ಕುಮಾರ ಭಾಗವಹಿಸಿದ್ದರು. ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ.,(ಎಸ್) ರವರು ಮೇಲು ಉಸ್ತುವಾರಿಯನ್ನು ವಹಿಸಿದ್ದರು.

## ಹಾಸನ

ದಿನಾಂಕ 26-09-2012 ರಂದು ಹಾಸನ ನಗರದ ಸರ್ಕಾರಿ ಕಲಾ ಕಾಲೇಜಿನಲ್ಲಿ ಪ್ರಪ್ರಥಮವಾಗಿ ಹಾಸನಾಂಬ ರೋವರ್ ಕ್ರ್ಯೂ ಮತ್ತು ರೇಂಜರ್ ಟೀಂ ಹೊಸ ಘಟಕಗಳನ್ನು ಪ್ರಾರಂಭಿಸಲಾಯಿತು. ಡಾ. ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು ದೀಪ ಬೆಳಗಿಸುವುದರ ಮೂಲಕ ಘಟಕಗಳನ್ನು ಉದ್ಘಾಟಿಸಿ ಮಾತನಾಡುತ್ತ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಹಿರಿಯರ ವಿಭಾಗವಾದ ರೋವರ್ಸ್ - ರೇಂಜರ್ಸ್ ವಿಭಾಗವು ಎಲ್ಲಾ ಸರ್ಕಾರಿ ಖಾಸಗಿ ಪ್ರಥಮದರ್ಜೆ ಕಾಲೇಜುಗಳಲ್ಲಿ ಪ್ರಾರಂಭಿಸಲು ಸರ್ಕಾರ ಆದೇಶ ಹೊರಡಿಸಿದ್ದು, ಈ ಸಂಸ್ಥೆಯ ಚಟುವಟಿಕೆ ಹಾಗೂ ಕಾರ್ಯಕ್ರಮಗಳಲ್ಲಿ ಕಾಲೇಜು ವಿದ್ಯಾರ್ಥಿ; ವಿದ್ಯಾರ್ಥಿನಿಯರು ಸಹಾ ಸಕ್ರಿಯವಾಗಿ ಭಾಗವಹಿಸಿ ಶಿಸ್ತು, ಸೇವಾ ಭಾವನೆ, ರಾಷ್ಟ್ರೀಯ ಭಾವೈಕ್ಯತೆ ಮುಂತಾದ ಗುಣಗಳನ್ನು ಬೆಳೆಸಿ ಸಮಾಜದ ಉತ್ತಮ ಪ್ರಜೆಯಾಗಲು ಅನುಕೂಲವಾಗಿದೆ ಎಂದು ತಿಳಿಸಿ ಶುಭ ಹಾರೈಸಿದರು.

ಜಿಲ್ಲಾ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಮುಖ್ಯ ಅತಿಥಿಯಾಗಿ ಆಗಮಿಸಿ ಮಾತನಾಡುತ್ತಾ ಇಂದಿನ ಕಾಲೇಜು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಸ್ಕೌಟಿಂಗ್-ಗೈಡಿಂಗ್ ಶಿಕ್ಷಣವು ಅತ್ಯಂತ ಅವಶ್ಯಕವಾಗಿ ಬೇಕಾಗಿದ್ದು ಸ್ಕೌಟಿಂಗ್-ಗೈಡಿಂಗ್‌ನ ತತ್ವ, ನಿಯಮಗಳನ್ನು



ದಿನಾಂಕ 30-09-2012ರಂದು ದೊಡ್ಡಬಳ್ಳಾಪುರದಲ್ಲಿ ನಡೆದ 94ನೇ ರಾಜ್ಯ ಪರಿಷತ್ ಸಭೆಯಲ್ಲಿ ಶ್ರೀ ಎ. ದೇವಪ್ರಕಾಶ್, ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲೀದ್, ರಾಜ್ಯ ಕೋಶಾಧಿಕಾರಿ ಶ್ರೀ ಟಿ. ಪ್ರಭಾಕರ್, ರಾಜ್ಯ ಗೈಡ್ ಆಯುಕ್ತೆ ಶ್ರೀಮತಿ ಶಾಂತ ವಿ. ಆಚಾರ್ಯ, ಉಪಾಧ್ಯಕ್ಷೆ ಶ್ರೀಮತಿ ಸರೋಜ ವಿ. ನಾಯ್ಡು ಹಾಗೂ ಸಭೆಯಲ್ಲಿ ಭಾಗವಹಿಸಿದ ಸದಸ್ಯರುಗಳನ್ನು ಕಾಣಬಹುದು.

**30-09-2012ರಂದು ನಡೆದ 94ನೇ ರಾಜ್ಯ ಪರಿಷತ್ ವಾರ್ಷಿಕ ಸಭೆಯಲ್ಲಿ 2011-2012ನೇ ಸಾಲಿನಲ್ಲಿ ಉತ್ತಮ ಕಾರ್ಯನಿರ್ವಹಣೆ ಮತ್ತು ಸಂಘಟನೆಗಾಗಿ ಕೆಳಕಂಡ ಜಿಲ್ಲೆಗಳಿಗೆ ವಿಭಾಗ ಮಟ್ಟದ ಪರ್ಯಾಯ ಫಲಕ ಹಾಗೂ ಪಾರಿತೋಷಕಗಳನ್ನು ಪ್ರಧಾನ ಮಾಡಲಾಯಿತು.**

## ಬೆಂಗಳೂರು ವಿಭಾಗ



ಪ್ರಥಮ ಸ್ಥಾನ : ಬೆಂಗಳೂರು ದಕ್ಷಿಣ ಜಿಲ್ಲೆ
ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಕೋಲಾರ ಜಿಲ್ಲೆ



ತೃತೀಯ ಸ್ಥಾನ : ಬೆಂಗಳೂರು ಉತ್ತರ ಜಿಲ್ಲೆ

## ಮೈಸೂರು ವಿಭಾಗ



ಪ್ರಥಮ ಸ್ಥಾನ : ದಕ್ಷಿಣ ಕನ್ನಡ ಜಿಲ್ಲೆ
ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಮೈಸೂರು ಜಿಲ್ಲೆ

ತೃತೀಯ ಸ್ಥಾನ : ಮಂಡ್ಯ ಜಿಲ್ಲೆ

## ಬೆಳಗಾವಿ ವಿಭಾಗ



ಪ್ರಥಮ ಸ್ಥಾನ : ಧಾರವಾಡ ಜಿಲ್ಲೆ
ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ



ದ್ವಿತೀಯ ಸ್ಥಾನ : ಬಾಗಲಕೋಟೆ ಜಿಲ್ಲೆ

ತೃತೀಯ ಸ್ಥಾನ : ಹಾವೇರಿ ಜಿಲ್ಲೆ

## ಗುಲ್ಬರ್ಗ ವಿಭಾಗ

ಪ್ರಥಮ ಸ್ಥಾನ : ರಾಯಚೂರು ಜಿಲ್ಲೆ ದ್ವಿತೀಯ ಸ್ಥಾನ : ಬಳ್ಳಾರಿ ಜಿಲ್ಲೆ ತೃತೀಯ ಸ್ಥಾನ : ಗುಲ್ಬರ್ಗ ಜಿಲ್ಲೆ
ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ

## 2011-12ನೇ ಸಾಲಿನ ರಾಜ್ಯ ಮಟ್ಟದ ಉತ್ತಮ ಶಿಕ್ಷಕರ ಪ್ರಶಸ್ತಿ ಪಡೆದವರು.



**ವಿಶೇಷ ಶಿಕ್ಷಕಿ ಪ್ರಶಸ್ತಿ**

ಶ್ರೀಮತಿ ಕೆ.ವಿ. ವಸಂತಮ್ಮ, ಹೆಚ್.ಡಬ್ಲ್ಯೂ.ಬಿ. (ಗೈಡ್ಸ್) ಗೈಡ್ ಕ್ಯಾಪ್ಟನ್, ಬಿ.ಆರ್.ಸಿ. ಕೇಂದ್ರ ಸಮನ್ವಯ ಶಿಕ್ಷಣ ಸಂಪನ್ಮೂಲ ಕೊಠಡಿ, ಆನೇಕಲ್, ಬೆಂಗಳೂರು ದಕ್ಷಿಣ ಜಿಲ್ಲೆ.



**ಜನಪ್ರಿಯ ಶಿಕ್ಷಕಿ ಪ್ರಶಸ್ತಿ**

ಶ್ರೀಮತಿ ಪ್ರಮೀಳ ಎಸ್. ಪಾಟೀಲ್, ಹೆಚ್.ಡಬ್ಲ್ಯೂ.ಬಿ. (ಗೈಡ್ಸ್) ಗೈಡ್ ಕ್ಯಾಪ್ಟನ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೊಟ್ನೂರು, ಗುಲ್ಬರ್ಗ ಜಿಲ್ಲೆ.



**ವಿಶೇಷ ಶಿಕ್ಷಕ ಪ್ರಶಸ್ತಿ**

ಶ್ರೀ ಪುಟ್ಟಸ್ವಾಮಿ, ಹೆಚ್.ಡಬ್ಲ್ಯೂ.ಬಿ. (ಸ್ಕೌಟ್ಸ್) ಸ್ಕೌಟ್ ಮಾಸ್ಟರ್ ಸರ್ಕಾರಿ ಪ್ರೌಢಶಾಲೆ, ಬಾಚೇನಹಳ್ಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ





ದಿನಾಂಕ 02-10-2012ರಂದು ಗಾಂಧಿ ಜಯಂತಿ ಅಂಗವಾಗಿ ರಾಯಚೂರು ಜಿಲ್ಲಾ ಸಂಸ್ಥೆ ಮತ್ತು ಜಿಲ್ಲಾಡಳಿತ ಹಾಗೂ ನಗರಸಭೆಯ ವತಿಯಿಂದ ಗಾಂಧಿಜಿಯವರ 144ನೇ ಜಯಂತಿಯನ್ನು ನಗರದ ಗಾಂಧಿ ಪ್ರತಿಮೆ ಬಳಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಾಗಿತ್ತು. ಸಮಾರಂಭದಲ್ಲಿ ಜಿಲ್ಲಾಧಿಕಾರಿಗಳಾದ ಶ್ರೀಮತಿ ಎಂ.ವಿ. ಸಾವಿತ್ರಿ, ಭಾ.ಆ.ಸೇ., ಸಹಾಯಕ ಆಯುಕ್ತೆ ಶ್ರೀಮತಿ ಮಂಜುಶ್ರೀ, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ ಶ್ರೀ ಬಿಸ್ನಳ್ಳಿ, ನಗರಸಭೆ ಅಧ್ಯಕ್ಷೆ ಶ್ರೀಮತಿ ಮಮತಾ ಸುಧಾಕರ್, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ ಮತ್ತು ನಗರ ಸಭೆ ಸದಸ್ಯರು ಹಾಗೂ ಜಿಲ್ಲಾಸಂಸ್ಥೆ ಪದಾಧಿಕಾರಿಗಳು ಇತರ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.





ದಿನಾಂಕ 27-09-2012ರಂದು ಭಾರತ್ ಸ್ಕೌಟ್ಸ್ & ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು, ಹಾಗೂ ಮೈಸೂರು ಜಿಲ್ಲಾ ಪಂಚಾಯತ್‌ಗಳ ಸಂಯುಕ್ತಾಶ್ರಯದಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್, ಗ್ರಾಮ ಪಂಚಾಯತ್ ಅಧಿಕಾರಿ ವರ್ಗದವರಿಗೆ ಸ್ಕೌಟ್ಸ್-ಗೈಡ್ಸ್ ಸಾಮಾನ್ಯ ಮಾಹಿತಿ ಶಿಬಿರವನ್ನು ಹಮ್ಮಿಕೊಳ್ಳಲಾಯಿತು. ಶ್ರೀಮತಿ ಭಾಗ್ಯ ಶಿವಮೂರ್ತಿ, ಜಿಲ್ಲಾ ಪಂಚಾಯತ್ ಅಧ್ಯಕ್ಷರು ಶಿಬರವನ್ನು ಉದ್ಘಾಟಿಸಿದರು. ಚಿತ್ರದಲ್ಲಿ ಜಿಲ್ಲಾ ಮತ್ತು ರಾಜ್ಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಶಿಬಿರದಲ್ಲಿ ಭಾಗವಹಿಸಿದ ಜಿಲ್ಲೆಯ ಪಂಚಾಯತ್ ಅಧಿಕಾರಿಗಳನ್ನು ಕಾಣಬಹುದು.



ದಿ. 26-09-2012ರಂದು ಹಾಸನ ನಗರದ ಸರ್ಕಾರಿ ಕಲಾ ಕಾಲೇಜಿನಲ್ಲಿ ಹಾಸನಾಂಬ ರೋವರ್ ಕ್ರ್ಯೂ ಮತ್ತು ರೇಂಜರ್ ಟೀಂ ಘಟಕದ ಉದ್ಘಾಟನಾ ಸಮಾರಂಭವು ನೆಡೆಯಿತು. ಚಿತ್ರದಲ್ಲಿ ಡಾ. ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಮುಖ್ಯ ಆಯುಕ್ತರು, ಪ್ರೊ. ಎಂ.ವಿ. ಹೇಮಾವತಿ, ಶ್ರೀ ಎಲ್.ಟಿ. ಲೋಕೇಶ್ ಮತ್ತು ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಪ್ರಕಾಶ್ ಎಸ್. ಯಾಜಿ ಹಾಗೂ ಇತರರನ್ನು ಕಾಣಬಹುದು.



ದಿ. 02-10-2012ರಂದು ಗಾಂಧಿ ಜಯಂತಿ ಪ್ರಯುಕ್ತ ಮಂಡ್ಯನಗರದ ಗಾಂಧಿ ಭವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಸಮಾರಂಭದಲ್ಲಿ ಮಂಡ್ಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಬಿ.ಎನ್. ಕೃಷ್ಣಯ್ಯ, ಭಾ.ಆ.ಸೇ. ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಜಯಣ್ಣ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.



Kum. Sonia Sing, Kum. Meghana Belavadi (Bangalore North) and Kum. Harani Chandra Shekar (Southern Railway). The Participants of World Girl Guide Forum 2012 held from 12th to17th July 2012 at U.S.A are seen with Sri L.M. Jain, National Commissioner, Smt. Geetha Rawat, Joint Director (Guides).



ದಿ. 16-10-2012ರಂದು ಉಡುಪಿಯಲ್ಲಿ ನಡೆದ ರಾಜ್ಯ ಮಟ್ಟದ ಸಾಹಸಮಯ ಮತ್ತು ತರಬೇತಿ ಸಲಹೆಗಾರರ ತರಬೇತಿ ಶಿಬಿರದ ಉದ್ಘಾಟನೆಯನ್ನು ಸ್ಥಳೀಯ ಕಾಪು ಕ್ಷೇತ್ರದ ಶಾಸಕ ಶ್ರೀ ಲಾಲಾಜಿ ಆರ್. ಮೆಂಡನ್‌ರವರು ನೆರವೇರಿಸಿದರು. ಚಿತ್ರದಲ್ಲಿ ಜಿಲ್ಲಾ ಪಂಚಾಯತ್ ಪ್ರಭಾರ ಅಧ್ಯಕ್ಷರಾದ ಶ್ರೀ ಉಪೇಂದ್ರ ನಾಯಕ್, ರಾಜ್ಯ ಗೈಡ್ಸ್ ಆಯುಕ್ತೆ ಶ್ರೀಮತಿ ಶಾಂತ ವಿ. ಆಚಾರ್ಯ ಇತರ ಜಿಲ್ಲಾ ಪದಾಧಿಕಾರಿಗಳನ್ನು ಹಾಗೂ ತರಬೇತಿದಾರರನ್ನು ಕಾಣಬಹುದು.



National Integration Camp held at Madhupur, Jarkhand State from 4th to 10th October 2012. Scouts and Guides are seen with Sri G.C. Devaraj, Sri Raju R. Naik and Smt. Shruti R. Naik.



ದಿನಾಂಕ 29-10-2012ರಂದು ಬೀದರ್‌ನಲ್ಲಿ ನಡೆದ ವಾಲ್ಮೀಕಿ ಜಯಂತಿಯಲ್ಲಿ ಭಾಗವಹಿಸಿದ ಸ್ಕೌಟ್ಸ್‌ಗಳು ಹಾಗೂ ಜಿಲ್ಲಾ ನೋಡಲ್ ಅಧಿಕಾರಿಗಳು ಹಾಗೂ ಜಿಲ್ಲಾ ದೈಹಿಕ ಶಿಕ್ಷಣ ಅಧಿಕಾರಿಗಳಾದ ಶ್ರೀ ದೇಶಪ್ಪ, ಎ.ಎಸ್.ಓ.ಸಿ ಶ್ರೀ ಎ.ಎಸ್. ಶಿವಕುಮಾರ್‌ರವರನ್ನು ಚಿತ್ರದಲ್ಲಿ ಕಾಣಬಹುದು.





ದಿ. 20-10-2012 ರಂದು ರಾಜ್ಯ ಕೇಂದ್ರ ಕಚೇರಿಯಲ್ಲಿ ಜರುಗಿದ ಶ್ರೀ ಐ.ಎ. ಕೈರಣ್ಣ ಹಾಗೂ ಶ್ರೀ ಎನ್. ಚಂದ್ರಶೇಖರ್ ರವರ ಶ್ರದ್ಧಾಂಜಲಿ ಸಭೆಯಲ್ಲಿ ಭಾಗವಹಿಸಿದವರು.

ಅನುಸರಿಸುವುದರ ಮೂಲಕ ಸಮಾಜದಲ್ಲಿ ಉತ್ತಮ ಪ್ರಜೆಯಾಗಲು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸಲು, ಶಿಸ್ತು, ಸೇವಾ ಭಾವನೆ ಮೂಡಿಸಲು, ಸಾಧ್ಯವಿದೆ ಎಂದು ತಿಳಿಸಿದರು. ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ., ರವರು ರಾಷ್ಟ್ರೀಯ ಸ್ಕೌಟಿಂಗ್-ಗೈಡಿಂಗ್ ಹುಟ್ಟು ಬೆಳವಣಿಗೆ ಬಗ್ಗೆ ರೋವರ್ಸ್ : ರೇಂಜರ್ಸ್‌ಗಳ ಕಾರ್ಯಕ್ರಮದ ಕುರಿತು ವಿವರವಾದ ಮಾಹಿತಿ ನೀಡಿದರು. ಪ್ರೊ. ಹೆಚ್.ವಿ. ಲಕ್ಷ್ಮೀನಾರಾಯಣ, ಪ್ರಾಂಶುಪಾಲರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಹಿರಿಯ ವಿಭಾಗದ ರೋವರ್-ರೇಂಜರ್ಸ್ ಘಟಕವು ಹಾಸನದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಉತ್ತಮವಾಗಿ ನಡೆಯಲು ಸಂಪೂರ್ಣ ಸಹಕಾರ-ಮಾರ್ಗದರ್ಶನ ನೀಡಲಾಗುವುದು ಎಂದು ತಿಳಿಸಿ ಈ ಕಾರ್ಯಕ್ರಮಗಳಿಗೆ ಎಲ್ಲಾ ವಿದ್ಯಾರ್ಥಿಗಳು ಸ್ವಯಂ ಪ್ರೇರಿತವಾಗಿ ನೊಂದಾವಣಿ ಮಾಡಿಕೊಂಡು ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಕರೆನೀಡಿದರು.

ಹಾಸನಾಂಬ ರೋವರ್ ಕ್ರ್ಯೂನ ರೋವರ್ ಲೀಡರ್ ಆದ ಶ್ರೀ ಉದಯಕುಮಾರ್ ಎಂ. ಮತ್ತು ರೇಂಜರ್ ಲೀಡರ್ ಶ್ರೀಮತಿ ಹೇಮಾವತಿ ಎಂ. ವಿ. ರವರು ಸಮಾರಂಭದಲ್ಲಿ ಉಪಸ್ಥಿತರಿದ್ದು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ರೋವರ್-ರೇಂಜರ್ಸ್ ಕಾರ್ಯಕ್ರಮದ ಕುರಿತು ಮಾಹಿತಿ ನೀಡಿದರು. ಕಾಲೇಜು ವಿದ್ಯಾರ್ಥಿಯಾದ ಮಂಜುನಾಥ ಮಣಕವಾಡ ವಂದಿಸಿದರು.

ದಿನಾಂಕ : 04-10-2012 ರಿಂದ 05-10-2012 ರ ವರೆಗೆ ಎರಡು ದಿನಗಳ ಕಾಲ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್‌ಗಳ ಪೆಟ್ರೋಲ್ ಲೀಡರ್ಸ್ ತರಬೇತಿಯನ್ನು ಹಾಗೂ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳಿಗೆ ಸಿಕ್ಸರ್ಸ್ ತರಬೇತಿಯನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ರೋಟರಿ ಆನ್ಸ್ ನ ಅಧ್ಯಕ್ಷರಾದ ಶ್ರೀಮತಿ ಶೀಲಾ ರಾಜ್ ರವರು ನೆರವೇರಿಸಿದರು. ಶ್ರೀಮತಿ ಉಮಾ, ರೋಟರಿ ಆನ್ಸ್‌ನ ಕಾರ್ಯದರ್ಶಿ, ಇತರೆ ಪದಾಧಿಕಾರಿಗಳು ಉಪಸ್ಥಿತರಿದ್ದು ರೋಟರಿ ಆನ್ಸ್ ಸಂಸ್ಥೆಯ ವತಿಯಿಂದ ಶಿಬಿರೋಪಕರಣಗಳನ್ನು ಮತ್ತು ಸ್ಪರ್ಧೆಯಲ್ಲಿ ವಿಜೇತರಿಗೆ ಬಹುಮಾನಗಳನ್ನು ನೀಡಿ ಪ್ರಶಂಶಿಸಿದರು. ಶ್ರೀಮತಿ ಶೈಲಾ ಅಭಿನಂದನ್, ಜಿಲ್ಲಾ ಗೈಡ್ಸ್ ಆಯುಕ್ತರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳು ಕಲಿತ ತರಬೇತಿಗಳನ್ನು ಇತರರಿಗೂ ಹಂಚಿ ದೇಶಸೇವೆ, ಸಮಾಜಸೇವೆ ಮಾಡುವುದರ ಮೂಲಕ ಗುರುತಿಸಿಕೊಳ್ಳಬೇಕೆಂದು ಸೂಚಿಸಿದರು.

ಶ್ರೀ ಎಂ.ಎಸ್. ಪ್ರಕಾಶ್ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಕಾಂಚನಮಾಲ, ಡಿ.ಟಿ.ಸಿ. (ಗೈಡ್), ಶ್ರೀಮತಿ ವೈ.ಡಿ. ಪದ್ಮ ಶ್ರೀ ಕೆ. ಭರತ್ ರಾಜ್ಯ ಸ್ಕೌಟರ್ ಪ್ರತಿನಿಧಿ ಶ್ರೀ ಆರ್.ಸಿ. ಬೈರಪ್ಪ, ಶ್ರೀ ಕೆ.ಎಂ. ಯಶೋಧ, ಸೋಫಿಯಾ ಫರ್ನಾಂಡೀಸ್ ಮತ್ತು ಜೋಸ್ಟಿನ್ ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ., ಹಾಗೂ ಕಬ್ ವಿಭಾಗಕ್ಕೆ ಶ್ರೀಮತಿ ಸಂಧ್ಯಾರಾಣಿ ಚಿಕ್ಕಮಗಳೂರು ಇವರು ಆಗಮಿಸಿ ಶಿಬಿರದಲ್ಲಿ ಸೇವೆ ಸಲ್ಲಿಸಿದರು. ಶ್ರೀ ಜೆ.ಎಲ್. ಶ್ರೀ ಮಹೇಶ್, ಅರಸೀಕೆರೆ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ವ್ಯಾಯಾಮಗಳ ಬಗ್ಗೆ ತಿಳಿಸಿಕೊಟ್ಟರು.

ದಿನಾಂಕ 04-10-2012 ರಂದು ಸಂಜೆ 5 ಗಂಟೆಗೆ ಶ್ರೀಯುತ ಸುರೇಶ್ ಗುರೂಜಿ ರವರು ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರು ಮತ್ತು ಯೋಗ ಶಿಕ್ಷಕರು ಇವರಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಯೋಗ ತರಬೇತಿ, ಪ್ರಾಣಾಯಾಮ, ಧ್ಯಾನ ಮುಂತಾದ ತರಬೇತಿ ನೀಡಿ ಯೋಗಾಭ್ಯಾಸದ ಪ್ರಯೋಜನ ತಿಳಿಸಿಕೊಟ್ಟರು. ದಿನಾಂಕ 05-10-2012 ರಂದು 11 ಗಂಟೆಗೆ ಲಯನ್ ಸಂಸ್ಥೆಯ ಅಧ್ಯಕ್ಷರಾದ ಶ್ರೀಯುತ ಆನಂದ ರವರ ನೇತೃತ್ವದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಉಚಿತ ಆರೋಗ್ಯ ತಪಾಸಣಾ ಕಾರ್ಯಕ್ರಮವನ್ನು ಶ್ರೀಮತಿ ರೂಪಾ ಆನಂದನ್, ಲಯನೆಸ್ ಸಂಸ್ಥೆಯ ಅಧ್ಯಕ್ಷರು ಇವರ ವತಿಯಿಂದ ಮಕ್ಕಳಿಗೆ ಆರೋಗ್ಯ ತಪಾಸಣಾ ಕಾರ್ಯಕ್ರಮ ಏರ್ಪಡಿಸಿ **"ಆರೋಗ್ಯ-ಅರಿವು"** ಕಾರ್ಯಕ್ರಮ ನಡೆಸಲಾಯಿತು. ಹಾಸನ ಮೆಡಿಕಲ್ ಕಾಲೇಜಿನ ವೈದ್ಯರ ತಂಡ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಆರೋಗ್ಯ ತಪಾಸಣೆಯನ್ನು ನಡೆಸಿಕೊಟ್ಟರು. ದಿನಾಂಕ : 05-10-2012 ರಂದು ಸಂಜೆ 5 ಗಂಟೆಗೆ ಶಿಬಿರದ ಸಮಾರೋಪ ಸಮಾರಂಭವು ಶ್ರೀ ಪ್ರಕಾಶ್ ಎನ್. ಯಾಜಿ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಮುತ್ತೇಗೌಡ, ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ಆರ್.ಸಿ. ಬೈರಪ್ಪ ವಂದಿಸಿದರು.

## ಬೆಳಗಾವಿ

ಇತ್ತೀಚೆಗೆ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳು ಕುಲ ಸಚಿವರು ಮತ್ತು ಸೆನೆಟ್ ಸದಸ್ಯರು ಹಾಗೂ ಕ್ರೀಡಾ ನಿರ್ದೇಶಕರುಗಳ ಸಂಘದ ಪದಾಧಿಕಾರಿಗಳ ಉಪಸ್ಥಿತಿಯಲ್ಲಿ, ವಿಶ್ವವಿದ್ಯಾಲಯದ ಸಭಾಭವನದಲ್ಲಿ ಕ್ರೀಡಾ ನಿರ್ದೇಶಕರುಗಳ ಸಮಾವೇಶ ಜರುಗಿತು. ಈ ಸಂದರ್ಭದಲ್ಲಿ ಶ್ರೀ ಟಿ.ಡಿ. ಕಾಂಬೋಜ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು ಬೆಳಗಾವಿ ಇವರೊಂದಿಗೆ ಶ್ರೀ ನಾಗೇಶ ಆರ್. ಶಿವಾಪುರ, ಎ.ಎಸ್.ಓ.ಸಿ. ಬೆಳಗಾವಿ ಇವರು ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣವನ್ನು ಪದವಿ ಕಾಲೇಜುಗಳಲ್ಲಿ ಸರ್ಕಾರಿ ಆದೇಶದಂತೆ ಪ್ರಾರಂಭಿಸುವ ಕುರಿತು ವಿವರಗಳನ್ನು ನಿಡಿದರು.

ದಿನಾಂಕ 05-09-2012 ರಂದು ಬೆಳಗಾವಿಯ ಗಾಂಧಿ ಭವನದಲ್ಲಿ ನಡೆದ ರಾಜ್ಯಮಟ್ಟದ ಶಿಕ್ಷಕರ ದಿನಾಚರಣೆ ಹಾಗೂ ಪ್ರಶಸ್ತಿ ಪ್ರಧಾನ ಸಮಾರಂಭವು ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಹಾಗೂ ನಗರ ಮತ್ತು ಗ್ರಾಮೀಣ ವಲಯದ ಶಾಸಕರುಗಳು ಹಾಗೂ ಮಾನ್ಯ ಮುಖ್ಯಮಂತ್ರಿಗಳ ನೇತೃತ್ವದಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿತು.

ಈ ಕಾರ್ಯಕ್ರಮದಲ್ಲಿ ಶಿಸ್ತು ಪಾಲನಾ ಸಮಿತಿಯಲ್ಲಿ ಸ್ಥಳೀಯ ಬಿ.ಕೆ. ಮಾಡೆಲ್ ಪ್ರೌಢಶಾಲೆಯ 15 ಸ್ಕೌಟ್‌ಗಳು ಮಹಿಳಾ ವಿದ್ಯಾಲಯದ 15 ಗೈಡ್‌ಗಳು ಹಾಗೂ ಸಂತ ಜೋಸೆಫ್ ಪ್ರೌಢಶಾಲೆಯ 15 ಗೈಡ್‌ಗಳು 3 ಜನ ಸ್ಕೌಟರ್, ಗೈಡರ್‌ಗಳು, ಎ.ಎಸ್.ಓ.ಸಿ., ಶ್ರೀ ನಾಗೇಶ್ ಆರ್. ಶಿವಾಪುರ, ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಶಿಸ್ತಿನ ಸಿಪಾಯಿಗಳಂತೆ ಕಂಡ ಸ್ಕೌಟ್ಸ್-ಗೈಡ್‌ಗಳನ್ನು ನೋಡಿದ ಮುಖ್ಯಮಂತ್ರಿಗಳ ಸಚಿವರು, ಶಾಸಕರುಗಳು ಹಾಗೂ ಶಿಕ್ಷಣ ಸಚಿವರು ಮೆಚ್ಚುಗೆ ವ್ಯಕ್ತಪಡಿಸಿದರು.

ಅಂತಾರಾಷ್ಟ್ರೀಯ ಸಾಕ್ಷರತಾ ದಿನಾಚರಣೆಯ ನಿಮಿತ್ತ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿಗಳು ದಿನಾಂಕ : 10-09-2012 ರಂದು ಜಿಲ್ಲಾ ಮಟ್ಟದ ಅಂತಾರಾಷ್ಟ್ರೀಯ ದಿನಾಚರಣೆಯನ್ನು ಬೈಲಹೊಂಗಲ ತಾಲೂಕಿನ ಹಣ್ಣಿಕೇರಿ ಗ್ರಾಮದಲ್ಲಿ ಆಯೋಜಿಸಿದ್ದರು. ಧ್ವಜಾರೋಹಣವನ್ನು ಕಿತ್ತೂರು ವಲಯದ ಮಾನ್ಯ ಶಾಸಕರಾದ ಶ್ರೀ ಸುರೇಶ ಮಾರಿಹಾಳ ಅವರು ನೆರವೇರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಪಂಚಾಯ್ತಿ ಸದಸ್ಯರುಗಳು, ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಗ್ರಾಮಪಂಚಾಯ್ತಿ ಅಧ್ಯಕ್ಷರು, ಸದಸ್ಯರು, ಹಾಗೂ ಜಿಲ್ಲಾ ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ ಅಧ್ಯಕ್ಷರಾದ ಶ್ರೀಮತಿ ರತ್ನಮ್ಮ ಯಾದವಾಡ ಜಿಲ್ಲಾ ಪಂಚಾಯ್ತಿ ಉಪಕಾರ್ಯದರ್ಶಿ ಶ್ರೀ ಶಶಿಧರ್, ಶ್ರೀ ದಿವಾಕರ ಬಾಬು ಭಟ್, ಡಿ.ಡಿ.ಪಿ.ಐ., (ಆಡಳಿತ) ಶ್ರೀ ಜಿ.ಆರ್. ಕೆಂಚರೆಡ್ಡಿ, ಡಿ.ಡಿ.ಪಿ.ಐ., (ಅಭಿವೃದ್ಧಿ) ಬೆಳಗಾವಿ, ಮಣ್ಣೂರು ಕಿತ್ತೂರು ವಲಯದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಿ.ಎಂ. ನಾಲತ್ತವಾಡ, ಎ.ಎಸ್.ಓ.ಸಿ., ಶ್ರೀ ನಾಗೇಶ ಆರ್. ಶಿವಾಪುರ. ಜಿಲ್ಲಾ ಸಂಘಟಕರು, ಶ್ರೀ ಡಿ.ಬಿ. ಅತ್ತಾರ್ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿ ಶ್ರೀ ಪಿ. ಪಿ. ಬಡಿಗೇರ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಸದರಿ ಕಾರ್ಯಕ್ರಮದ ಪಥಚಲನದಲ್ಲಿ ಜಿಲ್ಲೆಯಿಂದ 100 ಸ್ಕೌಟ್ಸ್-ಗೈಡ್ಸ್‌ಗಳು 4 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ 10-10-2012 ರಂದು ಜೈನ್ ಹೆರಿಟೇಜ್ ಶಾಲೆ, ಬೆಳಗಾವಿಯಲ್ಲಿ, ಕಬ್ಸ್ ಮತ್ತು ಬುಲ್ ಬುಲ್ಸ್ ಘಟಕಗಳ ಉದ್ಘಾಟನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಪ್ರೊಫೆಸರ್ ಶ್ರೀ ಆರ್.ಜಿ. ಧಾರವಾಡಕರ್, ಡೈರೆಕ್ಟರ್ ಆಫ್ ಉತ್ತರ ಕರ್ನಾಟಕ ಜೆ.ಜಿ.ಐ., ಬೆಳಗಾವಿ ಇವರ ಅಧ್ಯಕ್ಷತೆಯಲ್ಲಿ ಫ್ರೊಫೆಸರ್ ಶ್ರೀ ಉದಯ ಚಂದ ಡೈರೆಕ್ಟರ್ ಜೈನ್ ಕಾಲೇಜ್, ಬೆಳಗಾವಿ, ಮಿಸ್ ಶ್ರದ್ಧಾ ಕೆ. ಡೈರೆಕ್ಟರ್ ಜೈನ್ ಹೆರಿಟೇಜ್ ಶಾಲೆ, ಬೆಳಗಾವಿ, ಪ್ರೊಫೆಸರ್ ಶ್ರೀ ಕೆ.ಜಿ. ಮಳಲಿ, ರಿಜಿಸ್ಟ್ರಾರ್ ಜೆ.ಜಿ.ಐ., ಬೆಳಗಾವಿ, ಮಿಸ್ ಅಮ್ಮಿಜೋಷಿ, ಚೀಫ್ ಅಡ್ವವೈಜರ್, ಜೆ.ಹೆಚ್.ಎಸ್. ಬೆಳಗಾವಿ ಇವರ ಉಪಸ್ಥಿತಿಯಲ್ಲಿಕಬ್ ಪ್ಯಾಕ್ ಮತ್ತು ಬುಲ್ ಬುಲ್, ಫ್ಲಾಕ್ ಘಟಕಗಳ ಉದ್ಘಾಟನಾ ಸಮಾರಂಭವು ನಡೆಯಿತು.

ಶ್ರೀಮತಿ ಶ್ರದ್ಧಾ ಕೆ. ರವರು ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ಎಲಿಜಾ ಬೀಥ್ ರವರು ವಂದನಾರ್ಪಣೆ ಮಾಡಿದರು. ಶಾಲೆಯ ಮುಖ್ಯೋಪಾದ್ಯಾಯರು, ಸಹ ಶಿಕ್ಷಕ-ಶಿಕ್ಷಕಿಯರು, ಮಕ್ಕಳು, ಪಾಲಕರು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

# ಗದಗ

ದಿನಾಂಕ 01-09-2012 ರಂದು ನರಗುಂದ ತಾಲ್ಲೂಕ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕರುಗಳಿಗೆ ಒಂದು ದಿನದ ಪುನಃಚೇತನ ತರಬೇತಿ ಶಿಬಿರವನ್ನು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನರಗುಂದ ಇಲ್ಲಿ ನಡೆಸಲಾಯಿತು. ಈ ಶಿಬಿರದಲ್ಲಿ ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ಶ್ರೀ ಬಿ.ಬಿ. ತಿಪ್ಪನಗೌಡ ರವರು ಅಧ್ಯಕ್ಷತೆಯನ್ನು ವಹಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಆರ್.ಎಂ. ಕಾಳೆ ಸಂಸ್ಥೆಯ ಛೇರ್‌ಮನ್, ಶ್ರೀ ಡಿ.ಬಿ. ವೆಂಕಟರೆಡ್ಡಿಯವರು, ಸದಸ್ಯರು ಪುರಸಭೆ, ಶ್ರೀಮತಿ ಮಂಗಳ ಪಾಟೀಲ ಬಿ.ಇ.ಓ. ಹಾಗೂ ಎ.ಡಿ.ಸಿ. (ಜಿ) ಶಿಬಿರವನ್ನು ಉದ್ಘಾಟಿಸಿದರು. ಶಿಬಿರದ ನಾಯಕರಾಗಿ ಶ್ರೀ ಎನ್.ಹೆಚ್. ಜಾದವ್, ಡಿ.ಟಿ.ಸಿ.(ಎಸ್) ಹಾಗೂ ಕಾರ್ಯದರ್ಶಿಗಳಾದ ಶ್ರೀ ಬಿ.ಪಿ. ಶಿರಿಯಪ್ಪ ನವರು ಶ್ರೀಮತಿ ಎ.ಎಲ್. ಮೇಳನವರು, ಶ್ರೀ ಎಸ್.ಐ. ಅಂಕಲಿ, ಶ್ರೀ ಎಸ್.ವಿ. ಚಿಕ್ಕಮಠ ಶಿಬಿರದಲ್ಲಿ ಭಾಗವಹಿಸಿದರು.

ದಿನಾಂಕ 17-09-2012 ರಂದು ಹುಲಿಕೋಟಿ ಸಹಕಾರಿ ಶಿಕ್ಷಣ ಸಂಸ್ಥೆಯ ಪ್ರೌಢಶಾಲೆ, ಹುಯಿಲಗೋಳ, ಗದಗ ಗ್ರಾಮೀಣ ಶಾಲೆಯಲ್ಲಿ ನಾಡಕವಿ ಹುಯಿಲಗೋಳ ನಾರಾಯಣರಾವ್ ಸ್ಕೌಟ್ ದಳ ಉದ್ಘಾಟನೆ ಹಾಗೂ ದೀಕ್ಷಾ ಸಮಾರಂಭ ನಡೆಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಎಸ್.ಡಿ.ಎಂ.ಸಿ. ಅಧ್ಯಕ್ಷರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎಸ್. ಗುಡ್ಲನೂರ, ಬಿ.ಇ.ಓ., ಹಾಗೂ ಎ.ಡಿ.ಸಿ., (ಎಸ್) ಗದಗ ಗ್ರಾಮೀಣ ಸ್ಕೌಟ್ಸ್-ಗೈಡ್ಸ್‌ಗಳಿಗೆ ದೀಕ್ಷಾ ಬೋಧನೆಯನ್ನು ಸ್ಕೌಟ್ಸ್ ಶಿಕ್ಷಕ ಹಾಗೂ ಜಿಲ್ಲಾ ಸಂಘಟಕರಾದ ಶ್ರೀ ಕೆ.ಟಿ. ಮಲ್ಲೇಶಪ್ಪ, ಬೋಧಿಸಿದರು. ದೀಕ್ಷೆಯನ್ನು ಶ್ರೀ ಜಿ.ಎನ್. ಹಡ್ಲಿ ಸ್ಕೌಟ್ ಶಿಕ್ಷಕರು ನೀಡಿದರು. ನಂತರ ಉದ್ಘಾಟನಾ ಕಾರ್ಯಕ್ರಮದಲ್ಲಿ ಮೊದಲಿಗೆ ಸ್ಕೌಟ್ಸ್-ಗೈಡ್ಸ್‌ಗಳಿಂದ ಪ್ರಾರ್ಥನೆಯನ್ನು ಮಾಡಿಸಲಾಯಿತು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಎಂ.ಪಿ. ಕ್ಯಾಮನಗೌಡ್ರ ಸ್ವಾಗತಿಸುತ್ತ ಪ್ರಾಸ್ತಾವಿಕ ನುಡಿಗಳನ್ನು ನುಡಿದರು. ಈ ಕಾರ್ಯಕ್ರಮದಲ್ಲಿ ಶ್ರೀ ಜಿ.ಹೆಚ್. ಪೂಜಾರ ಸಹಕಾರ್ಯದರ್ಶಿಗಳು ಶ್ರೀ ಎಸ್.ಬಿ. ಅಂಗಡಿ, ಸ್ಕೌಟ್ ಶಿಕ್ಷಕ ಶ್ರೀಮತಿ ಹುಯಿಲಗೋಳ, ತಾಲ್ಲೂಕು ಪಂಚಾಯಿತಿ ಸದಸ್ಯರು ಗದಗ, ಶ್ರೀಮತಿ ಸುಮಾ ಬೆಳಗಟ್ಟಿ, ಮಾಜಿ ತಾಲ್ಲೂಕು ಪಂಚಾಯ್ತಿ ಸದಸ್ಯರು ಶ್ರೀಮತಿ ಮಂಜುಳಾ ಪೋಲೀಸ್ ಪಾಟೀಲ, ಗ್ರಾಂ. ಪಂಚಾಯ್ತಿ ಅಧ್ಯಕ್ಷರು ಹುಯಿಲಗೋಳ, ಶ್ರೀ ವಿ.ಬಿ. ಪೋಲಿಸ್ ಪಾಟೀಲ ಕಾರ್ಯದರ್ಶಿಗಳು, ಶ್ರೀ ನಿಜಗುಣ ಹೂಗಾರ, ಶ್ರೀ ರಮೇಶ್ ಕಡಿಯವರ ಶ್ರೀ ವೈ.ಡಿ. ರತ್ನಗಿರಿ ಪ್ರಧಾನ ಗುರುಗಳು ಹೆಚ್.ಪಿ.ಎಸ್. ಹುಯಿಲಗೋಳ, ಶ್ರೀ ಎಂ.ಹೆಚ್. ವ್ಯಾಕಲಗಂಟಿ ರವರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ಎಸ್.ಹೆಚ್. ಬಾರಕೇರ ಸ್ವಾಗತಿಸಿದರು, ಶ್ರೀ ವಸಂತರಾವ್ ಡಿ.ಹೆಚ್. ವಂದಿಸಿದರು.

# ತುಮಕೂರು

ದಿನಾಂಕ 08-09-2012 ರಂದು ರಾಜ್ಯ ಪುರಸ್ಕಾರ ಮಕ್ಕಳ ವನವಿದ್ಯಾ ಸಂಕೇತದೊಂದಿಗೆ ದೇವರಾಯನ ದುರ್ಗದಲ್ಲಿ ಸುಮಾರು 160 ಸ್ಕೌಟ್ಸ್-ಗೈಡ್ಸ್ ಹಾಗೂ 10 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ದಿನಾಂಕ 11-09-2012 ರಂದು ತುರುವೇಕೆರೆ ತಾಲ್ಲೂಕು ಮಟ್ಟದ ರ್‍ಯಾಲಿ ನಡೆಸಲಾಯಿತು. ರ್‍ಯಾಲಿಯಲ್ಲಿ 180 ಸ್ಕೌಟ್ಸ್-ಗೈಡ್ಸ್, ಕಬ್, ಬುಲ್‌ಬುಲ್ ಮಕ್ಕಳು ಭಾಗವಹಿಸಿದ್ದರು. 8 ಗೈಡರ್ಸ್ 4 ಫ್ಲಾಕ್ ಲೀಡರ್ಸ್ 16 ಸ್ಕೌಟರ್ಸ್, 8 ಕಬ್ ಮಾಸ್ಟರ್ಸ್ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು ಶ್ರೀಧನಪಾಲ್ ಅಧ್ಯಕ್ಷತೆಯಲ್ಲಿ ಬಿ.ಇ.ಓ., ರವರು ರ್‍ಯಾಲಿ ಉದ್ಘಾಟಿಸಿದರು ರಾಜ್ಯ ಸಂಸ್ಥೆಯಿಂದ ಎಸ್.ಟಿ.ಸಿ., (ಗೈ) ಶ್ರೀಮತಿ ಕೆ.ಕೆ. ಲೀಲಾ ರವರು ಜಿಲ್ಲಾ ಸಂಸ್ಥೆಯಿಂದ ಡಿ.ಓ., ಶ್ರೀ ಕರಿಸಿದ್ಧಪ್ಪ ಭಾಗವಹಿಸಿದ್ದರು. ಸ್ಕೌಟ್ಸ್-ಗೈಡ್ಸ್. ಕಬ್ಸ್, ಬುಲ್‌ಬುಲ್ಸ್‌ಗಳಿಗೆ ಶಿಕ್ಷಕರಿಗೆ ರಾಜ್ಯ ತರಬೇತಿ ಆಯುಕ್ತೆ ಶ್ರೀಮತಿ ಕೆ.ಕೆ. ಲೀಲಾ ರವರು ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿ ಶುಭ ಕೋರಿದರು.

## ಉಡುಪಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಬ್ರಹ್ಮಾವರ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್, ಗೈಡ್ಸ್‌ಗಳಿಗೆ ಪಟಾಲಂ ನಾಯಕರ ತರಬೇತಿ ಶಿಬಿರವನ್ನು ದಿನಾಂಕ 16-09-2012 ರಂದು ಎಸ್.ಎಂ.ಎಸ್. ಆಂಗ್ಲ ಮಾಧ್ಯಮ ಶಾಲೆ, ಬ್ರಹ್ಮಾವರ ಇಲ್ಲಿ ಸಂಘಟಿಸಲಾಯಿತು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಶೇಡಿಕೊಡ್ಲು ಶ್ರೀ ವಿಠಲ್ ಶೆಟ್ಟಿ ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ. ಕೃಷ್ಣಮೂರ್ತಿಯವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಕಾರ್ಯಕ್ರಮ ಉದ್ಘಾಟಿಸಿದರು. ಶಾರದಾ ಪ್ರೌಢಶಾಲೆ ಚೇರ್ಕಾಡಿ ಗೈಡ್ ಶೃತಿ ಎಲ್ಲರನ್ನೂ ಸ್ವಾಗತಿಸಿದರು. ವಿದ್ಯಾ ಧನ್ಯವಾದ ನೀಡಿದರು. ಜಿಲ್ಲಾ ಸಂಸ್ಥೆಯಿಂದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಬಿ. ಆನಂದ ಅಡಿಗ, ಎಲ್.ಟಿ.(ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಆರ್.ಟಿ. ಭಟ್, ಖಜಾಂಚಿ ಶ್ರೀಮತಿ ರೇವತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಪಟಾಲಂ ವಿಧಾನ ನಾಯಕತ್ವದ ಗುಣಗಳು, ಸಮವಸ್ತ್ರದ ಪರಿಚಯ, ಗಂಟುಗಳು, ಧ್ವಜಸ್ಥಂಭ ರಚನೆ, ಧ್ವಜವಂದನೆ ಮೊದಲಾದ ವಿಷಯಗಳ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮಾಹಿತಿ ನೀಡಲಾಯಿತು. 85 ಸ್ಕೌಟ್ಸ್- ಗೈಡ್ಸ್‌ಗಳು ಶಿಬಿರದಲ್ಲಿ ಭಾಗವಹಿಸಿದ್ದರು.

**ದಳಗಳ ಉದ್ಘಾಟನೆ**

ದಿನಾಂಕ 10-09-2012 ರಂದು ಕುಂದಾಪುರ ಕೋಡಿ ಬ್ಯಾರೀಸ್ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳನ್ನು ಸಂಸ್ಥೆಯ ಅಧ್ಯಕ್ಷರಾದ ಹಾಜಿಮಸ್ತಾನ್ ಶ್ರೀ ಮಹಮ್ಮದ್ ಇವರ ಅಧ್ಯಕ್ಷತೆಯಲ್ಲಿ ಜರಗಿತು. ಸ್ಥಾನೀಯ ಆಯುಕ್ತರಾದ (ಸ್ಕೌಟ್ಸ್) ಶ್ರೀ ಬಿ. ಆನಂದ ಅಡಿಗ ಇವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಕುಂದಾಪುರ ಸ್ಥಳೀಯ ಸಂಸ್ಥೆಯ ಅಧ್ಯಕ್ಷೆ ಶ್ರೀಮತಿ ಗುಣರತ್ನ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು ಸಂಸ್ಥೆಯ ಮುಖ್ಯಸ್ಥೆ ಶ್ರೀಮತಿ ರೇಶ್ಮಾ ಡಿಸೋಜ ಸ್ವಾಗತಿಸಿದರು. ಗೈಡರ್ ಕುಮಾರಿ ಸುಶೀಲ ಧನ್ಯವಾದ ನೀಡಿದರು.

ಉಡುಪಿ ಜಿಲ್ಲಾ ಲಕ್ಷ್ಮೀಸೋಮ ಬಂಗೇರ ಸರಕಾರಿ ಪ್ರಥಮ ದರ್ಜೆ ಕಾಲೇಜು, ಕೋಟ-ಪಡುಕರೆ ಕಾಲೇಜಿನಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕದ ಉದ್ಘಾಟನಾ ಸಮಾರಂಭವು ತರಬೇತಿ ಆಯುಕ್ತರಾದ ಶ್ರೀ ಕೊಗ್ಗ ಗಾಣಿಗರವರಿಂದ ನೆರವೇರಿತು. ಸಂಪನ್ಮೂಲ ವ್ಯಕ್ತಿಯಾಗಿ ಉಡುಪಿ ಸ್ಕೌಟ್ಸ್ ತರಬೇತಿ ವಿಭಾಗದ ಸ್ಥಾನೀಯ ಆಯುಕ್ತರಾದ ಶ್ರೀ ಬಿ. ಆನಂದ ಅಡಿಗರವರು ರೋವರ್ಸ್ ರೇಂಜರ್ಸ್ ಘಟಕದ ಕಾರ್ಯ ಹಾಗೂ ಅವಶ್ಯಕತೆಗಳ ಕುರಿತಾಗಿ ಮಾಹಿತಿಯನ್ನು ನೀಡಿದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಕೆಂಜೂರು ವಸಂತರಾಜಶೆಟ್ಟಿ ಯವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದರು. ರೇಂಜರ್ ಲೀಡರ್ ವಾಣಿಜ್ಯಶಾಸ್ತ್ರ ಉಪನ್ಯಾಸಕಿ ಕುಮಾರಿ ವಾರಿಜ ವಂದನಾರ್ಪಣೆಗೈದರು, ರೋವರ್ ಸ್ಕೌಟ್ ಲೀಡರ್ ದೈಹಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಸತೀಶ್ ಕುಮಾರ್ ಕೆ.ಆರ್. ಕಾರ್ಯಕ್ರಮ ನಿರ್ವಹಿಸಿದರು. ರೋವರ್ಸ್ ಮತ್ತು ರೇಂಜರ್ಸ್ ಹಾಗೂ ಉಪನ್ಯಾಸಕ ವೃಂದದವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

**ಕಾಪು ಪಟಾಲಂ ಮತ್ತು ಷಟ್ಕ ನಾಯಕರ ತರಬೇತಿ ಶಿಬಿರ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾಪು ಸ್ಥಳೀಯ ಸಂಸ್ಥೆಯ ವತಿಯಿಂದ ಶಿರ್ವ ವಿದ್ಯಾವರ್ಧಕ ಆಂಗ್ಲ ಮಾಧ್ಯಮ ಶಾಲೆ ಇಲ್ಲಿ ದಿನಾಂಕ 05-10-2012 ರಿಂದ 06-10-2012 ರ ವರೆಗೆ ಪಟಲಾಂ ಮತ್ತು ಷಟ್ಕ ನಾಯಕರ ತರಬೇತಿ ಶಿಬಿರವು ನಡೆಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾಪು ಸ್ಥಳೀಯ ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಆಲ್ಬನ್ ರೋಡ್ರಿಗೆಸ್ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ದೇವದಾಸ್ ಹೆಬ್ಬಾರ್, ಅಧ್ಯಕ್ಷ ಉಡುಪಿ ತಾಲೂಕು ಪಂಚಾಯತ್ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಸಂಚಾಲಕರು, ವಿದ್ಯಾವರ್ಧಕ ಆಂಗ್ಲ ಮಾಧ್ಯಮ ಶಾಲೆ ಶಿರ್ವ, ಶ್ರೀ ಮಟ್ಟಾರು ರತ್ನಾಕರ್ ಹೆಗ್ಡೆ ಇವರು ವಹಿಸಿದ್ದರು. ಪ್ರೊ. ಭಾಸ್ಕರ್ ಶೆಟ್ಟಿ, ಆಡಳಿತಾತ್ಮಕ ಅಧಿಕಾರಿ, ವಿದ್ಯಾವರ್ಧಕ ಸಂಘ, ಶ್ರೀ ಪ್ರಶಾಂತ್ ಕುಮಾರ್ ನಂಬಿಯಾರ್, ಪ್ರಾಂಶುಪಾಲರು, ವಿದ್ಯಾವರ್ಧಕ ಆಂಗ್ಲ ಮಾಧ್ಯಮ ಶಾಲೆ ಶಿರ್ವ, ಶ್ರೀ ಅರುಣ್ ಶೆಟ್ಟಿ ಪಾದೂರು, ಜಿಲ್ಲಾ ಪಂಚಾಯತ್ ಸದಸ್ಯರು, ಉಡುಪಿ ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಕಲ್ಮಾಡಿ ಶೇಖರ್ ಪೂಜಾರಿ, ಜಿಲ್ಲಾ ಕಾರ್ಯದರ್ಶಿ, ಶ್ರೀ ಯಂ. ಪ್ರಭಾಕರ್ ಭಟ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತ (ಸ್ಕೌಟ್ಸ್) ಶ್ರೀ ಶಿವಣ್ಣ ಬಾಯಾರ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಇವರುಗಳು ಉಪಸ್ಥಿತರಿದ್ದರು. ಶಿಬಿರದ ನಾಯಕಿ ಶ್ರೀಮತಿ ನಿಶಾ ಶೆಟ್ಟಿ ಶಿಬಿರದ ವರದಿ ನೀಡಿದರು. ಒಟ್ಟು 255 ವಿದ್ಯಾರ್ಥಿಗಳು, ಶಿಕ್ಷಕರು ಭಾಗವಹಿಸಿದ್ದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲೆ ವಿಭಾಗವಾಗಿ ಕಲ್ಯಾಣಪುರ ಸ್ಥಳೀಯ ಸಂಸ್ಥೆಯನ್ನು ದಿನಾಂಕ 14-09-2012 ರಂದು ಸಂತೆಕಟ್ಟೆ ಮೌಂಟ್ ರೋಜರಿ ಆಂಗ್ಲ ಮಾಧ್ಯಮ ಶಾಲೆ ಇಲ್ಲಿ ರಚಿಸಲಾಯಿತು. ಶ್ರೀ ಮಧುಕರ್, ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಬ್ರಹ್ಮಾವರ ವಲಯ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶಾಲಾ ಮುಖ್ಯ ಶಿಕ್ಷಕಿ ಶ್ರೀಮತಿ ಸಿ. ಎಡ್ರಿಯಾನ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ, ಜಿಲ್ಲಾ ತರಬೇತಿ ಆಯುಕ್ತರು(ಗೈಡ್ಸ್) ಕು. ವನಿತಾ ಎಂ. ರಾವ್, ಸ್ಥಾನೀಯ ಆಯುಕ್ತ ಶ್ರೀ ಬಿ. ಆನಂದ ಅಡಿಗ ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಯಂ. ಪ್ರಭಾಕರ್ ಭಟ್ ಸ್ವಾಗತಿಸಿದರು. ಇದೇ ಸಂದರ್ಭದಲ್ಲಿ ದಿವಂಗತ ಐ.ಎ. ಕೈರನ್ನ, ಸಹಾಯಕ ರಾಜ್ಯ ಆಯುಕ್ತರು, ಮೈಸೂರು ವಿಭಾಗ ಹಾಗೂ ಹಿಂದಿನ ಡಿ.ಸಿ.ಸಿ. ಮಂಗಳೂರು ಇವರಿಗೆ ಶ್ರದ್ಧಾಂಜಲಿ ಸಲ್ಲಿಸಲಾಯಿತು.

ಹೊಸ ಸಮಿತಿಯ ಅಧ್ಯಕ್ಷರಾಗಿ ಶ್ರೀ ಸಲ್ವಾದರ ಕ್ರಾಸ್ತಾ, ಕಾರ್ಯದರ್ಶಿಯಾಗಿ ಶ್ರೀ ವಿನಯ್ ಶೇಟ್, ಖಜಾಂಚಿಯಾಗಿ ಶ್ರೀ ಇಕೆ.ಎಸ್. ಸಂಜೀವ, ಕಾರ್ಯಾಧ್ಯಕ್ಷರಾಗಿ ಶ್ರೀ ಮಧುಕರ್, ಉಪಾಧ್ಯಕ್ಷರಾಗಿ ಶ್ರೀಮತಿ ಎಲ್ವಿರಾ ಮಸ್ಕರೇನಸ್, ಶ್ರೀ ಸಂತೋಷ್ ಮಾಬೆನ್, ಶ್ರೀ ಮಂಜುನಾಥ ಉಪಾಧ್ಯ, ಶ್ರೀ ವಿವಿಯನ್ ಕರ್ನೇಲಿಯೋ, ಶ್ರೀಮತಿ ಲವಿನಾ ಸಿಕ್ವೇರಾ, ಶ್ರೀ ಶೇಖರ್ ಬೈಕಾಡಿ, ಶ್ರೀಮತಿ ಮೇರಿ ಕರ್ನೇಲಿಯೋ ಆಯ್ಕೆಯಾದರು. ಜತೆ ಕಾರ್ಯದರ್ಶಿ ಕು. ಮಲ್ಲಿಕಾ, ಸಹಕಾರ್ಯದರ್ಶಿಯಾಗಿ ಶ್ರೀ ಉಮೇಶ್ ಇವರುಗಳನ್ನು ಆಯ್ಕೆ ಮಾಡಲಾಯಿತು.

**ಕಾರ್ಕಳ ಪಟಲಾಂ ನಾಯಕರ ತರಬೇತಿ ಶಿಬಿರ ಹಾಗೂ ಪುನಶ್ಚೇತನ ಶಿಬಿರ**

ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್ ಶಿಕ್ಷಕ-ಶಿಕ್ಷಕಿಯರ ಪುನಶ್ಚೇತನ ಶಿಬಿರ ಹಾಗೂ ಪಟಲಾಂ ನಾಯಕರ ತರಬೇತಿ ಶಿಬಿರವನ್ನು ದಿನಾಂಕ 22-09-2012 ರಂದು ಕೆ.ಎಂ.ಇ.ಎಸ್. ಆಂಗ್ಲ ಮಾಧ್ಯಮ ಶಾಲೆ ಕುಕ್ಕಂದೂರಿನಲ್ಲಿ ಸಂಘಟಿಸಲಾಯಿತು. ಕಾರ್ಕಳ ಶಾಸಕರಾದ ಮಾನ್ಯ ಶ್ರೀ ಎಚ್. ಗೋಪಾಲ ಭಂಡಾರಿ ಇವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಉಡುಪಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಜ್ಯೋತಿ ಜೆ. ಪೈ. ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಹೆಡ್ ಕ್ವಾಟರ್ಸ್ ಕಮಿಷನರ್ (ಗೈಡ್ಸ್) ಶ್ರೀಮತಿ ಸಾವಿತ್ರ ಮನೋಹರ್, ಸಹಾಯಕ ಜಿಲ್ಲಾ ಆಯುಕ್ತರು ಶ್ರೀ ಶ್ರೀಧರ್ ಆಚಾರ್, ಕಾರ್ಕಳ ವಲಯ ಶಿಕ್ಷಣ ಸಂಯೋಜಕ ಶ್ರೀ ಶೇಖರ್ ಶೆಟ್ಟಿ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಶ್ರೀ ಬಾಬು ಪೂಜಾರಿ, ಕೆ.ಎಂ.ಇ.ಎಸ್. ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಶ್ರೀ ಕೆ.ಎಸ್. ಇಮ್ತಿಯಾಜ್ ಅಹಮದ್ ಸದಸ್ಯರಾದ ಶ್ರೀ ಮುನೀರ್ ಅಹಮದ್, ಶ್ರೀ ಶೇಖ್ ಇಸ್ಮಾಯಿಲ್ ಉಪಸ್ಥಿತರಿದ್ದರು. ಶ್ರೀಮತಿ ಗೀತಾ ಶೆಟ್ಟಿಗಾರ್ ಸ್ವಾಗತಿಸಿದರು. ಶ್ರೀ ಗಣೇಶ್ ಜಾಲ್ಸೂರ್ ಕಾರ್ಯಕ್ರಮ ನಿರೂಪಿಸಿದರು. ಶ್ರೀಮತಿ ಫರಿದಾ ವಂದಿಸಿದರು.

ಸಮಾರೋಪ ಸಮಾರಂಭವು ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಎಂ.ಕೆ. ವಿಜಯಕುಮಾರ್ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಇಮ್ತಿಯಾಸ್ ಅಹಮದ್. ಶ್ರೀ ಯಂ. ಪ್ರಭಾಕರ್ ಭಟ್. ರಾಜ್ಯ ಸಹಾಯಕ ಸಂಘಟನಾ ಆಯುಕ್ತ (ಸ್ಕೌಟ್ಸ್) ಶ್ರೀ ಬಾಬು ಪೂಜಾರಿ ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಅತಿಥಿಗಳಾಗಿ ಭಾಗವಹಿಸಿದ್ದರು.

**ಬೈಂದೂರು ಪುನಶ್ಚೇತನ ಶಿಬಿರ**

ಬೈಂದೂರು ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್, ಕಬ್ಸ್, ಬುಲ್-ಬುಲ್ಸ್, ಶಿಕ್ಷಕ-ಶಿಕ್ಷಕಿಯರ ಪುನಶ್ಚೇತನ ಶಿಬಿರವನ್ನು ದಿನಾಂಕ 22-09-2012 ರಂದು ಶುಭದಾ ಆಂಗ್ಲ ಮಾಧ್ಯಮ ಶಾಲೆ ಕಿರಿಮಂಜೇಶ್ವರ ಇಲ್ಲಿ ಸಂಘಟಿಸಲಾಯಿತು. ಅಧ್ಯಕ್ಷತೆಯನ್ನು ಶುಭದಾ ಆಂಗ್ಲ ಮಾಧ್ಯಮ ಶಾಲೆಯ ಮುಖ್ಯೋಪಾಧ್ಯಾಯರು ವಹಿಸಿದ್ದರು. ಸ್ಕೌಟ್ಸ್ ಸ್ಥಾನೀಯ ಆಯುಕ್ತರಾದ ಶ್ರೀ ಬಿ.ಎ. ರಝಾಕ್ ರವರು ಜ್ಯೋತಿ ಬೆಳಗುವ ಮೂಲಕ ಶಿಬಿರ ಉದ್ಘಾಟನೆಗೈದರು. ಸಭಾಧ್ಯಕ್ಷರೂ, ಶಾಲೆಯ ಮುಖ್ಯೋಪಾಧ್ಯಾಯರೂ ಆಗಿರುವ ಶ್ರೀ ಎಂ.ಜಿ. ಬಾನಾವಳಿಕರ್ ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜಿ. ಹನುಮಂತ ಧನ್ಯವಾದ ನೀಡಿದರು. ಸ್ಕೌಟ್ ಶಿಕ್ಷಕ ಶ್ರೀ ಗೋವಿಂದರಾಜ್ ಕಾರ್ಯಕ್ರಮ ನಿರೂಪಿಸಿದರು. ನಂತರ ಮ್ಯಾಪಿಂಗ್, ಕಂಪಾಸ್, ಧ್ವಜ ಕಟ್ಟುವುದರ ಬಗ್ಗೆ ಪರಿಣಾಮಕಾರಿಯಾಗಿ ದಳವನ್ನು ಹೇಗೆ ಮುಂದುವರಿಸಿಕೊಂಡು ಹೋಗುವುದು ಗಂಟುಗಳು, ಲ್ಯಾಶಿಂಗ್, ಮತ್ತು ಬ್ಯಾಂಡೇಜ್‌ಗಳ ಬಗ್ಗೆ ಮಾಹಿತಿ ನೀಡಲಾಯಿತು.

## ಕಾರವಾರ

**ದಿನಾಂಕ** 02-10-2012 ರಂದು ಗಾಂಧಿ ಜಯಂತಿಯನ್ನು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಶ್ರದ್ಧಾಭಕ್ತಿಯಿಂದ ಆಚರಿಸಿದರು. ಅಂದು ಫಾದರ್ ಜೋಜಿ ಥಾಮಸ್ ರವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭಗೊಂಡಿತು. ಸ್ಕೌಟ್ಸ್-ಗೈಡ್ಸ್‌ಗಳು ಶಾಲೆಯ ಆವರಣವನ್ನು ಸ್ವಚ್ಛಗೊಳಿಸಿದರಲ್ಲದೇ ಶಾಲೆಯ ಶೌಚಾಲಯಗಳನ್ನು ತೊಳೆದು ಬಾಪೂಜಿಯವರ ಭಾವಚಿತ್ರಕ್ಕೆ ಪುಷ್ಪಗಳನ್ನು ಅರ್ಪಿಸಿ ನಮನ ಸಲ್ಲಿಸಿದರು. ಸ್ಕೌಟ್ಸ್ ಗೈಡ್ಸ್‌ಗಳು ಕಾರ್ಯಕ್ರಮವನ್ನು ನೋಡಿದ ಎಲ್ಲಾ ಶಿಕ್ಷಕರು ಹಾಗೂ ಪ್ರಾಂಶುಪಾಲರು ಶ್ಲಾಘಿಸಿದರು. ಈ ಸಂದರ್ಭದಲ್ಲಿ ನೇತೃತ್ವ ವಹಿಸಿದ ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ನರೇಶ್ ನಾಯ್ಕ ಶ್ರೀ ಮುರುಳಿ ಜೋಸ್, ಮಿಸ್ ಖುಷಬೂ ಇವರು ಕೂಡ ಸ್ವಚ್ಛತಾ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಿ ಮಕ್ಕಳನ್ನು ಹುರಿದುಂಬಿಸಿದರು. ಕೊನೆಯಲ್ಲಿ ಫಾದರ್ ಜೋಜಿ ಥಾಮಸ್‌ರವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಿಹಿ ಹಾಗೂ ಪಾನೀಯವನ್ನು ನೀಡಿದರು.

## ಮಂಡ್ಯ

ದಿನಾಂಕ 21-09-2012 ರಂದು ಪಾಂಡವಪುರ ತಾಲ್ಲೂಕು ಮೇಲುಕೋಟೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳ ಹಾಗೂ ಕೋಶಾಧಿಕಾರಿಗಳ ಸಭೆಯನ್ನು ಏರ್ಪಡಿಸಲಾಗಿತ್ತು. ಈ ಸಭೆಯಲ್ಲಿ ಸ್ಥಳೀಯ ಸಂಸ್ಥೆಗಳ 2012-13 ನೇ ಸಾಲಿನಲ್ಲಿ ನಡೆಸಬೇಕಾದ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳ ಬಗ್ಗೆ ಗಣತಿಯನ್ನು ಪೂರ್ಣಗೊಳಿಸುವ ಬಗ್ಗೆ ಹಾಗೂ ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯಿತಿಗಳಿಂದ ಅನುದಾನವನ್ನು ವಸೂಲಿ ಮಾಡುವ ಬಗ್ಗೆ ಚರ್ಚಿಸಲಾಯಿತು.

ದಿನಾಂಕ : 21-09-2012 ಮತ್ತು 22-09-2012 ರಂದು ಈ ಎರಡು ದಿನಗಳು ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವನ್ನು ಮೇಲುಕೋಟೆಯ ಸರ್ಕಾರಿ ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳ ಗುಣಮಟ್ಟವನ್ನು ಹೆಚ್ಚಿಸುವುದರ ಬಗ್ಗೆ ಚರ್ಚಿಸಲಾಯಿತು. ರಾಜ್ಯ ಪುರಸ್ಕಾರ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್, ಚತುರ್ಥ ಚರಣ್ ಕಬ್ಸ್ ಹಾಗೂ ಹೀರಕ್ ಪಂಖ್ ಬುಲ್ ಬುಲ್‌ಗಳನ್ನು ತಯಾರು ಮಾಡುವ ಬಗ್ಗೆ ಮಾಹಿತಿಯನ್ನು ನೀಡಲಾಯಿತು.

ದಿನಾಂಕ 02-10-2012 ರಂದು ಗಾಂಧಿ ಜಯಂತಿ ಪ್ರಯುಕ್ತ ಮಂಡ್ಯನಗರದ ಗಾಂಧಿ ಭವನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ "ಸರ್ವಧರ್ಮ ಪ್ರಾರ್ಥನೆ" ಯನ್ನು ಏರ್ಪಸಿಡಲಾಯಿತು. ಈ ಸಮಾರಂಭದಲ್ಲಿ ಮಂಡ್ಯ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಎಸ್. ಕೃಷ್ಣಯ್ಯ

ಭಾ.ಆ.ಸೇ. ಹಾಗೂ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು, ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಜಿಲ್ಲಾ ಸ್ಕೌಟ್ ಮತ್ತು ಗೈಡ್ ವಿಭಾಗದ ಜಿಲ್ಲಾ ಆಯುಕ್ತರುಗಳು ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಸಮಾರಂಭದಲ್ಲಿ ಭಾಗವಹಿಸಿ ಜಯಂತಿಯು ಯಶಸ್ವಿಯಾಗಿ ನಡೆಯಲು ಸಹಕರಿಸಿದರು.

## ಬಾಗಲಕೋಟೆ

ದಿನಾಂಕ 09-10-2012 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಮಟ್ಟದ ಚಟುವಟಿಕೆಗಳ ಕುರಿತು ಪೂರ್ವಬಾವಿ ಸಭೆಯನ್ನು ಜಿಲ್ಲೆಯ ಎಲ್ಲಾ ತಾಲ್ಲೂಕ್ ಕಾರ್ಯದರ್ಶಿಗಳು, ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರುಗಳು ಸಭೆಯನ್ನು ನಡೆಸಲಾಯಿತು. ಸಭೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರಾದ ಶ್ರೀ ಎ.ಎಂ. ಮಡಿವಾಳ ರವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳ ಕುರಿತು ಚರ್ಚಿಸಲಾಯಿತು. ಜಿಲ್ಲೆಯ ಪ್ರತಿಯೊಂದು ಶಾಲೆಯ ಶಿಕ್ಷಕರುಗಳು ಸ್ಕೌಟ್ಸ್-ಗೈಡ್ಸ್ ತರಬೇತಿ ಪಡೆದು ಶಾಲೆಯಲ್ಲಿ ಕಡ್ಡಾಯವಾಗಿ ದಳವನ್ನು ಪ್ರಾರಂಭಿಸಬೇಕು. ಹಾಗೂ ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ರಾಷ್ಟ್ರೀಯ ಹಬ್ಬಗಳಲ್ಲಿ ಸಮವಸ್ತ್ರದೊಂದಿಗೆ ಕಡ್ಡಾಯವಾಗಿ ಭಾಗವಹಿಸುವಂತೆ ಮುಖ್ಯ ಆಯುಕ್ತರು ಸೂಚಿಸಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ ಯವರು ಹೆಚ್.ಡಬ್ಲ್ಯೂ.ಬಿ., ಹೋಲ್ಡರ್ಸ್ ಹಾಗೂ ತಾಲ್ಲೂಕು ಕಾರ್ಯದರ್ಶಿಗಳಿಗೆ ಸ್ಕೌಟ್ಸ್-ಗೈಡ್ಸ್‌ಗಳನ್ನು ರಾಜ್ಯಮಟ್ಟ ರಾಷ್ಟ್ರಮಟ್ಟದ ಶಿಬಿರಗಳು ಹಾಗೂ ರಾಜ್ಯ ಪುರಸ್ಕಾರ ರಾಷ್ಟ್ರಪತಿ ಪುರಸ್ಕಾರ ಶಿಬಿರಗಳಿಗೆ ಜಿಲ್ಲೆಯಿಂದ ಹೆಚ್ಚು ಭಾಗವಹಿಸುವಂತೆ ಸೂಚಿಸಿದರು. ಸಭೆಯಲ್ಲಿ ತಾಲ್ಲೂಕ ಕಾರ್ಯದರ್ಶಿಗಳು ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರು ಜಿಲ್ಲೆಯ ಹೆಚ್.ಡಬ್ಲ್ಯೂ.ಬಿ. ಹೋಲ್ಡರ್ಸ್ ಹಾಗೂ ಜಿಲ್ಲಾ ಪದಾಧಿಕಾರಿಗಳು ಶ್ರೀ ಎ.ಬಿ. ಚೌಗಲಾ ನಾರಾಯಣ, ಶ್ರೀ ಯೆಳ್ಳಿ ಗುತ್ತಿ, ಜಿಲ್ಲಾ ಸಂಘಟಕರಾದ ಶ್ರೀ ಎಸ್.ಹೆಚ್. ಹತ್ತಿಮತ್ತೂರ. ಶ್ರೀಮತಿ ಸುಷ್ಮಾ ಗುಡ್ಡದ, ಪಿ.ಜಿ. ಬಂದಿಕೇರಿ ಹಾಗೂ ಇತರರು ಉಪಸ್ಥಿತರಿದ್ದರು.

## ಕೊಪ್ಪಳ

ದಿನಾಂಕ : 18-10-2012 ರಂದು ಜಿಲ್ಲೆಯ ಸ್ಕೌಟ್ ಗೈಡ್ ತರಬೇತಿ ಕೇಂದ್ರದ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸಲು ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಆಯುಕ್ತರುಗಳು ಹಾಗೂ ಜಿಲ್ಲಾ ಪ್ರತಿನಿಧಿಗಳು ಸೇರಿ ನಗರಕ್ಕೆ ಆಗಮಿಸಿದ್ದ ಮಾನ್ಯ ಮುಖ್ಯಮಂತ್ರಿಗಳಿಗೆ ಮನವಿ ಪತ್ರವನ್ನು ಸಲ್ಲಿಸಲಾಯಿತು.

ಕೊಪ್ಪಳ ನಗರದ ಹೊರ ವಲಯದಲ್ಲಿ 8 ಎಕರೆ ಸರ್ಕಾರಿ ಜಮೀನನ್ನು ಹಿಂದಿನ ಜಿಲ್ಲಾಧಿಕಾರಿಗಳಾದ ಡಾ॥ ನಾಗಲಾಂಬಿಕಾ ರವರು ಸ್ಕೌಟ್ ಗೈಡ್ ಜಿಲ್ಲಾ ಸಂಸ್ಥೆಗೆ ಸರ್ಕಾರದಿಂದ ಮಂಜೂರು ಮಾಡಿಕೊಟ್ಟಿದ್ದರು. ಸ್ಕೌಟ್ ಗೈಡ್ ಸಂಸ್ಥೆಗೆ ಮಂಜೂರಾದ ಜಮೀನಿನಲ್ಲಿ ಜಿಲ್ಲಾ ತರಬೇತಿ ಕೇಂದ್ರವನ್ನಾಗಿ ಅಭಿವೃದ್ಧಿಗೊಳಿಸುವದಕ್ಕೋಸ್ಕರ ಮಾನ್ಯ ಸಂಸತ್ ಸದಸ್ಯರು, ಮಾನ್ಯ ಶಾಸಕರುಗಳು, ಜಿಲ್ಲಾ ಸ್ಕೌಟ್ ಗೈಡ್ ಅಧ್ಯಕ್ಷರು ಮತ್ತು ಜಿಲ್ಲಾಧಿಕಾರಿಗಳು, ಜಿಲ್ಲಾ ಸ್ಕೌಟ್ ಗೈಡ್ ಆಯುಕ್ತರು ಮತ್ತು ಜಿಲ್ಲಾ ಪ್ರತಿನಿಧಿಗಳನ್ನೊಳಗೊಂಡು ಗಂಗಾವತಿ ನಗರಕ್ಕೆ ದಿನಾಂಕ 18-10-2012 ರಂದು ರಂಭಾಪುರಿ ಜಗದ್ಗುರುಗಳ ದಸರಾ ದರ್ಬಾರ ಸಮ್ಮೇಳನದಲ್ಲಿ ಭಾಗವಹಿಸಲು ಆಗಮಿಸಿದ ಕರ್ನಾಟಕ ರಾಜ್ಯದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಜಗದೀಶ ಶೆಟ್ಟರ್ ಇವರಿಗೆ ಮನವಿ ಪತ್ರವನ್ನು ಸಲ್ಲಿಸಿ ಅವರೊಂದಿಗೆ ಜಿಲ್ಲಾ ತರಬೇತಿ ಕೇಂದ್ರ ಅಭಿವೃದ್ಧಿಪಡಿಸಲು ಸುದೀರ್ಘವಾಗಿ ಚರ್ಚಿಸಲಾಯಿತು.

ಸ್ಕೌಟ್ ಗೈಡ್ ಸೇವಾ ಸಂಸ್ಥೆಗೆ ತರಬೇತಿ ಕೇಂದ್ರದ ಅಭಿವೃದ್ಧಿಗೊಳ್ಳುವದು ಅವಶ್ಯಕವಿದ್ದು, ಜಿಲ್ಲೆಯ ಸ್ಕೌಟ್-ಗೈಡ್ ಶಿಕ್ಷಣ ಅಭಿವೃದ್ಧಿಪಥದಲ್ಲಿ ಸಾಗಲು ಮಾನ್ಯ ಮುಖ್ಯ ಮಂತ್ರಿಗಳು ತ್ವರಿತವಾಗಿ ಅನುದಾನ ಮಂಜೂರು ಮಾಡಲು ಒಪ್ಪಿಗೆ ಸೂಚಿಸಿದರು.

# ಬಿಜಾಪುರ

**ಸಮುದಾಯ ಸೇವಾ ಶಿಬಿರ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪುರ, ಹಾಗೂ ಕರ್ನಾಟಕ ಚಲನಚಿತ್ರ ಅಕಾಡೆಮಿ(ಬೆಳ್ಳಿಮಂಡಲ) ವಿಜಾಪುರ ಇವರ ಸಂಯುಕ್ತ ಆಶ್ರಯದಲ್ಲಿ ಜ್ಞಾನ ಯೋಗಾಶ್ರಮ ವಿಜಾಪುರ ಇಲ್ಲಿ ದಿನಾಂಕ 10-10-2012 ರಿಂದ 11-10-2012 ರವರಗೆ ಸಮುದಾಯ ಸೇವಾ ಶಿಬಿರವನ್ನು ಆಯೋಜಿಸಲಾಗಿತ್ತು.

ಶಿಬಿರದ ಸಾನಿದ್ಯವನ್ನು ಆಶ್ರಮದ ಪರಮ ಪೂಜ್ಯಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಸ್ಥಾನಿಕ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ ಸಕ್ರಿ ಅವರು ಅಧ್ಯಕ್ಷತೆ ವಹಿಸಿದ್ದರು ಜಿಲ್ಲಾ ಸಂಸ್ಥೆಯ ಉಪಾದ್ಯಕ್ಷರಾದ ಶ್ರೀ ಪೂಜೆಪ್ಪ ಪೂಜಾರಿ ಅವರು ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದರು. ಅತಿಥಿಗಳಾಗಿ ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಜಿಲ್ಲಾ ಕಾರ್ಯದರ್ಶಿ ಶ್ರೀ ಅರ್ಜುನ ಲಮಾಣಿ, ಶ್ರೀ ಶರಣು ಸಬರದ, ನಗರದ ಖ್ಯಾತ ವ್ಯಾಪಾರಸ್ಥರಾದ ಶ್ರೀ ಶಾಂತಕುಮಾರ ರೋಡಗಿ ತಾಲ್ಲೂಕ ಪಂಚಾಯತ್ ಸದಸ್ಯರಾದ ಶ್ರೀ ಸಂಗಮೇಶ ದಾಶ್ಯಳ ಉಪಸ್ಥಿತರಿದ್ದರು.

ಸಸಿಗೆ ನೀರೆರೆಯುವ ಮೂಲಕ ಶಿಬಿರ ಉದ್ಘಾಟಿಸಿದ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಆಶೀರ್ವಚನ ನೀಡಿ, ಮಕ್ಕಳ ಮನಸ್ಸು ಹೂವಿನ ಮೊಗ್ಗಿನಂಥದ್ದು. ಅದನ್ನು ಅರಳಿಸುವ ಕಾರ್ಯ ಆರಂಭಿಕ ಹಂತದಲ್ಲಿಯೇ ಮಾಡುವುದು ಅಗತ್ಯವಾಗಿದ್ದು ಇದನ್ನು ಸ್ಕೌಟ್ಸ್-ಗೈಡ್ಸ್‌ಗಳಿಂದ ಪರಿಣಾಮಕಾರಿಯಾಗಿ ಮಾಡಲು ಸಾದ್ಯ ಎಂದು ಜಿಲ್ಲಾ ಸಂಸ್ಥೆಯ ಸೇವೆಯನ್ನು ಶ್ಲಾಘಿಸಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಸಿದ್ದಣ್ಣ ಎಂ. ಸಕ್ರಿ ಮಾತನಾಡಿ ಶಿಸ್ತು ಮತ್ತು ಸೇವೆಗೆ ಹೆಸರಾದ ಸ್ಕೌಟ್-ಗೈಡ್ ಇಂದು ನಗರದ ಆಶ್ರಮ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಸಮುದಾಯ ಸೇವಾ ಶಿಬಿರ ಹಮ್ಮಿಕೊಂಡಿದ್ದು ಮಕ್ಕಳಲ್ಲಿ ಸೇವಾಭಾವನೆ ಮತ್ತು ಸಮಾಜ ಸೇವೆಯಂಥ ಮಾನವೀಯ ಮೌಲ್ಯ ಮೂಡಿಸಲು ಉತ್ತಮ ವೇದಿಕೆಯಾಗಿದೆ ಎಂದರು. ಮುಖ್ಯ ಅತಿಥಿ ಶ್ರೀ ಪೂಜೆಪ್ಪ ಪೂಜಾರಿ ಮಾತನಾಡಿ ಇಂದಿನ ಮಕ್ಕಳು ಟಿ ವಿ, ಮೊಬೈಲ್ ದಾಸರಾಗಿ ಅಮೂಲ್ಯ ಸಮಯ ವ್ಯರ್ಥ, ಹಾಳು ಮಾಡದೆ ಸಮುದಾಯ ಸೇವೆಯಂಥ ಸಾಮಾಜಿಕ ಸೇವೆಯಲ್ಲಿ ತೊಡಗಿ ಮನುಕುಲದ ಮೌಲ್ಯ ಎತ್ತಿ ಹಿಡಿಯಲು ಕರೆನೀಡಿದರು. ತಾಲೂಕ ಪಂಚಾಯತ ಸದಸ್ಯರಾದ ಶ್ರೀ ಸಂಗಮೇಶ ದಾಶ್ಯಾಳ ಮತ್ತು ವ್ಯಾಪಾರಸ್ಥರಾದ ಶ್ರೀ ಶಾಂತಕುಮಾರ ರೂಡಗಿ ಶ್ರೀ ಡಿ. ಡಿ. ಅಂಕಲಗಿ ಅವರು ಮಕ್ಕಳಿಗೆ ಹಿತವಚನ ಹೇಳಿದರು.

ನಂತರ ಸಮುದಾಯ ಸೇವೆಯಲ್ಲಿ ತೊಡಗಿದ ಸ್ಕೌಟ್ ಗೈಡ್‌ಗಳು ಆಶ್ರಮದ ಆವರಣ ಮತ್ತು ಸುತ್ತಮುತ್ತಲಿನ ರಸ್ತೆ ಮತ್ತು ಆವರಣಗಳನ್ನು ಶುಚಿಗೊಳಿಸಿದರು. ಸಮುದಾಯ ಸೇವೆಯಲ್ಲಿ ಜಿಲ್ಲೆಯ ವಿವಿಧ ದಳಗಳಿಂದ 126 ಸ್ಕೌಟ್ಸ್‌ಗಳು ಮತ್ತು 96 ಗೈಡ್ಸ್‌ಗಳು ಪಾಲ್ಗೊಂಡಿದ್ದರು.

**ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪುರ, ಶ್ರೀ ಅಲ್ಲಮ ಪ್ರಭು ಪ್ರಾಥಮಿಕ ಹಾಗೂ ಪ್ರೌಡಶಾಲೆ ವಿಜಾಪುರ ಹಾಗೂ ಕರ್ನಾಟಕ ಚಲನಚಿತ್ರ ಅಕಾಡೆಮಿ(ಬೆಳ್ಳಿಮಂಡಲ) ವಿಜಾಪುರ ಇವರ ಸಂಯುಕ್ತ ಆಶ್ರಯದಲಿ ಶ್ರೀ ಅಲ್ಲಮ ಪ್ರಭು ಪ್ರಾಥಮಿಕ ಶಾಲೆ ವಿಜಾಪುರ ಇಲ್ಲಿ ದಿನಾಂಕ: 7-10-2012 ರಿಂದ 09-10-2012 ರವರೆಗೆ ಮೂರು ದಿನಗಳ ಕಾಲ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಜಿಲ್ಲೆಯ ವಿವಿಧ ದಳಗಳಿಂದ 126 ಸ್ಕೌಟ್ಸ್‌ಗಳು ಮತ್ತು 96 ಗೈಡ್ಸ್‌ಗಳು ಪಾಲ್ಗೊಂಡಿದ್ದರು. ಉದ್ಘಾಟನಾ ಕಾರ್ಯಕ್ರಮಕ್ಕೆ ವಿಜಾಪುರ ನಗರ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಆರ್. ವಾಯ್ ಕೊಣ್ಣೂರ ಅವರು ಮುಖ್ಯ ಅತಿಥಿಗಳಾಗಿ, ಶ್ರೀ ಹುಂಡೇಕಾರ ಅವರು ಅಧ್ಯಕ್ಷರಾಗಿ ಮತ್ತು ಅತಿಥಿಗಳಾಗಿ ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೆರಕಲ್, ಜಿಲ್ಲಾ ಖಜಾಂಚಿ ಶ್ರೀ ಸಹಜಾನಂದ ದಂಧರಗಿ, ಸಿ ಪಿ ಐ ಶ್ರೀ ಮಹೇಶಗೌಡ, ಡಯಟ್ ಉಪನ್ಯಾಸಕ

ಶ್ರೀ ರವಿ ಯಲಡಗಿ, ಶ್ರೀ ಶರಣು ಸಬರದ, ಜಿಓಸಿಸಿ ಬ್ಯಾಂಕಿನ ಅಧ್ಯಕ್ಷರಾದ ಶ್ರೀ ಚಂದ್ರಶೇಖರ ಲೆಂಡಿ, ಉಪಾಧ್ಯಕ್ಷರಾದ ಶ್ರೀ ಭೀಮನಗೌಡ ಬಿರಾದಾರ ಶ್ರೀ ಎಸ್.ಬಿ. ಬಜಂತ್ರಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮನಳ್ಳಿ ಉಪಸ್ಥಿತರಿದ್ದರು.

ನಂತರ ಮಾತನಾಡಿದ ಕ್ಷೇತ್ರ ಶಿಕ್ಷಣಾಧಿಕಾರಿ ಆರ್. ವಾಯ್ ಕೊಣ್ಣೂರ ಅವರು ಮುಂಬರುವ ದಿನಗಳಲ್ಲಿ ನಗರದ ಪ್ರತಿಯೊಂದು ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕಡ್ಡಾಯವಾಗಿ ಒಂದು ಸ್ಕೌಟ್:ಗೈಡ್ ದಳ ಇರುವಂತೆ ಕ್ರಮ ಜರುಗಿಸಲಾಗುವುದು ಎಚಿದರು. ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ವಾಸುದೇವ ಹೆರಕಲ್ ಅವರು ಜಿಓಸಿಸಿ ಬ್ಯಾಂಕಿನ ಅಧ್ಯಕ್ಷರಿಗೆ ಮನವಿ ಸಲ್ಲಿಸಿ ಜಿಲ್ಲಾ ಸಂಸ್ಥೆಗೆ 10 ಟೆಂಟ್ ಗಳನ್ನು ಒದಗಿಸಿಕೊಡುವಂತೆ ವಿನಂತಿಸಿದರು. ಶ್ರೀ ಜಗದೀಶ ಬೋಳಸೂರ ಸ್ವಾಗತಿಸಿದರು ಶ್ರೀ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಳ್ಳಿ ವಂದಿಸಿದರು.

ದಿನಾಂಕ 9-10-2012 ರಂದು ಸಾಯಂಕಾಲ ನಡೆದ ಶಿಬಿರದ ಮುಕ್ತಾಯ ಸಮಾರಂಭಕ್ಕೆ ವಿಜಾಪುರ ಗ್ರಾಮೀಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಎಂ. ವಾಯ್ ಹೊನ್ನಕಸ್ತೂರಿ ಮುಖ್ಯ ಅತಿಥಿಯಾಗಿ, ಶ್ರೀ ವಿವೇಕಾನಂದ ಹುಂಡೇಕಾರ ಅಧ್ಯಕ್ಷರಾಗಿ ಮತ್ತು ಅತಿಥಿಗಳಾಗಿ ಶ್ರೀ ಸುರೇಶ ಶಡಶಾಳ, ವಿಷಯ ಪರಿವೀಕ್ಷಕರಾದ ಶ್ರೀ ಚಂದ್ರಶೇಖರ ರುದ್ರಗೌಡರ ನಾಗೇಶ ಸಿನ್ನೂರ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಭಾಗ್ಯಶ್ರೀ ಸಿಂದಗೀಕರ, ಶ್ರೀ ಶರಣು ಸಬರದ ಉಪಸ್ಥಿತರಿದ್ದರು.

## Bangalore South

The Bharat Scouts & Guides, Bangalore South District Association conducted the following courses at Dr. Annie Besant Scout/Guide Camping & Training Center, Doddaballapur from 4th October 2012 to 10th October 2012. A total of 242 Participants attended the Camp.

Mr. T K Narayanswamy, LT(S), DTC(S) was the Camp Director and Mr. M S Satheesh, District Secretary & Madhusudan A S coordinated the camp. Mr. R M Muniyellappa & Ananth B S Served as quarter master of the camp. Mr. M K Khan, DCC & Mr. N Anand, District Secretary were present in the Course.

The Camp was inaugurated by Sri. C S Reddy , Hon. STC(S) and Mr. M K Khan, DCC presided over the opening ceremony.

Mr. Puttanna, MLC & Mr. Kondajji B Shanmukhappa were the chief guest for the Closing Ceremony.

---

**ಎಲ್ಲಿಯವರೆಗೂ ನಮ್ಮನ್ನು ಸುಖಿಗಳನ್ನಾಗಿ**
**ಮಾಡುವುದಕ್ಕೆ ಮತ್ತೊಂದು ವಸ್ತುವಿನ ಆಸರೆ ಬೇಕೋ,**
**ಅಲ್ಲಿಯವರೆಗೂ ನಾವು ಗುಲಾಮರು**

---

**ಶೂರರು, ವಿದ್ಯಾವಂತರು,**
**ಚೆನ್ನಾಗಿ ಸೇವೆ ಮಾಡಬಲ್ಲವರು**
**ಈ ಮೂವರೂ**
**ಭೂಮಿಯಲ್ಲಿ ಸುವರ್ಣ ಪುಷ್ಪಗಳನ್ನು ಬೆಳೆಸಬಲ್ಲರು**

---

# THE BHARAT SCOUTS AND GUIDES, KARNATAKA

## *Equipment Department, Price List of Scouts & Guides Equipments*

| S.N. | Particular | Rate in Rs. |
|---|---|---|
| 01 | Scout Belt(Bross Buckle) | 42.00 |
| 02 | Guide Belt (Bross Buckle) | 45.00 |
| 03 | Scout Cap | 40.00 |
| 04 | Cap Badge | 06.00 |
| 05 | Woggle (Special) | 05.00 |
| 06 | Cub Cap | 30.00 |
| 07 | Scarf (General) | 20.00 |
| 08 | Knife | 25.00 |
| 09 | HWB Scarf | 25.00 |
| 10 | HWB Woggle | 15.00 |
| 11 | Commissioner Scarf | 25.00 |
| 12 | Lanyard (Guide) | 05.00 |
| 13 | Stockings (Block) | 42.00 |
| 14 | Socks (White) | 22.00 |
| 15 | Socks camel colour | 25.00 |
| 16 | Garter Tabs (Green) | 10.00 |
| 17 | Flag Top | 25.00 |
| 18 | C.D. NHQ (Songs) | 40.00 |
| 19 | Geethanjali Casset | 30.00 |

**BADGES**

| S.N. | Particular | Rate in Rs. |
|---|---|---|
| 01 | Pravesh Badge (Green) | 02.00 |
| 02 | World Brother Hood Badge | 02.00 |
| 03 | World Sister hood Badge | 02.00 |
| 04 | Pravesh Badge (Blue) | 01.00 |
| 05 | Pravesh Badge (Red) | 01.00 |
| 06 | Scout Master Rank Badge | 03.00 |
| 07 | Cub Master Rank Badge | 03.00 |
| 08 | R.S.L. Rank Badge | 03.00 |
| 09 | Bharat Scouts and Guides Name Badge | 02.00 |
| 10 | Pratam Soopan Badge | 01.00 |
| 11 | Dwitiya Sopan Badge | 01.00 |
| 12 | Tritiya Sopan Badge | 02.00 |
| 13 | Patrol Emblem (Guides) | 02.00 |
| 14 | Patrol Emblem (Bulbul) | 02.00 |
| 15 | Proficiency Badge (Ord) | 01.00 |
| 16 | Proficiency Badges (Spl) | 02.00 |
| 17 | Proficiency Badges (C&B) | 01.00 |
| 18 | Troop Leader Badge | 02.00 |
| 19 | Asst. Troop Leader Badge | 02.00 |
| 20 | Solder Strips (Rover) | 20.00 |
| 21 | Commissioner Rank Badge | 03.00 |
| 22 | Komal Punk | 01.00 |
| 23 | Rajat Punk | 01.00 |
| 24 | Suvarna Punk | 01.00 |
| 25 | Pratam Charan | 01.00 |
| 26 | Dwitiya Charan | 01.00 |
| 27 | Tritiya Charan | 01.00 |

| S.N. | Books Particular | Rate in Rs. |
|---|---|---|
| 01 | Cub Hand Book | 13.00 |
| 02 | Pravesh to Chaturta Charan | 23.00 |
| 03 | Scouting for Boys | 53.00 |
| 04 | Pravesh Scout | 08.00 |
| 05 | Pratam Sopan Scout | 07.00 |
| 06 | Aids to S.M. Ship | 15.00 |
| 07 | Scout Log Book- I | 40.00 |
| 08 | Scout Log Book-II | 24.00 |
| 09 | Scheme of Training(S) | 21.00 |
| 10 | Flock Leader Hand Book | 20.00 |
| 11 | Brownee Stories | 20.00 |
| 12 | A Book to Bloom | 22.00 |
| 13 | Pravesh Guide | 07.00 |
| 14 | APRO – Kan (Guide) | 15.00 |
| 15 | Guide Log Book –I | 34.00 |
| 16 | APRO – Rover (Kan) | 20.00 |
| 17 | Rovering to success | 40.00 |
| 18 | Rover Scouting | 11.00 |
| 19 | Jeevana Saphalatheya Marga(Kan) | 65.00 |
| 20 | APRO – Kan (Ranger) | 05.00 |
| 21 | A Great Lady our Great inspiration | 60.00 |
| 22 | Sanitation Promoter | 03.00 |
| 23 | Citizen | 09.00 |
| 24 | Leprosy Control | 02.00 |
| 25 | 100 Glories of Scout Movement | 130.00 |
| 26 | Life Story of B.P. | 15.00 |
| 27 | Camp fire Hand Book | 08.00 |
| 28 | Transitional Analysis | 05.00 |
| 29 | Hand Book of Effective Trg. Sessions. | 20.00 |
| 30 | Scheme of Training (G) | 25.00 |
| 31 | Scout Master Kaipidi (Kan) | 50.00 |
| 32. | ಲೋಕಮಾನ್ಯ ಲೇಡಿ ಅಲೇವ್ ಬೇಡನ್ ಪೊವೆಲ್ ರವರ ಜೀವನ ಮತ್ತು ಸಾಧನೆ | 15.00 |

**Songs Books**

| | | |
|---|---|---|
| 01 | Geetha Bharthi | 02.00 |
| 02 | Swarna Lahari | 06.00 |
| 03. | Hamare Solah Geet | 03.00 |

**Applications & Photos**

| | | |
|---|---|---|
| 01 | B.P. Photo (Big) | 07.00 |
| 02 | Lady B.P. Photo (Big) | 07.00 |
| 03 | B.P.Photo (Small) | 02.00 |
| 04 | Lady B.P. Photo (Small) | 02.00 |
| 05 | Rajyapuraskar Forms | 03.00 |
| 06 | Test Cards(Cub & Bulbul, Scout & Guide) | 02.00 |

..............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 3 ಶಿಬಿರಾಗ್ನಿ ಉದಂತ ಸಂ – 8

# ಕಾರ್ಯಸರಣಿ

## ಶಿಬಿರ ಜೀವನ (Camp Life)

### ಮಾರ್ಗ ಕಲ್ಪನೆ (Pioneering)

**ಗಂಟು ಹಾಕುವುದು – ಗುಡಿಸಲು ಕಟ್ಟುವುದು – ಮರವನ್ನು ಕೆಡವುವುದು – ಸೇತುವೆ ಕಟ್ಟುವುದು – ಸ್ವಂತ ಅಳತೆಗಳು – ಎತ್ತರ ಮತ್ತು ದೂರಗಳನ್ನು ಅಂದಾಜು ಮಾಡುವುದು**

**ನದಿಯ ಅಗಲವೆಷ್ಟು?:**

ನದಿಯ ಅಗಲವನ್ನು ಅಂದಾಜು ಮಾಡುವುದು ಹೀಗೆ. ನದಿಯ ಎದುರು ದಡದಲ್ಲಿ ಮರ, ಬಂಡೆ ಮುಂತಾದ ವಸ್ತುವನ್ನು (ಎಕ್ಸ್) ಗಮನಿಸಿ, ನೀವು ನಿಂತಿರುವ ಜಾಗವನ್ನು 'ಎ' ಎಂದಿಟ್ಟುಕೊಳ್ಳೋಣ (ಚಿತ್ರವನ್ನು ನೋಡಿ) ಅಲ್ಲಿಂದ ಸಮಕೋನದಲ್ಲಿ (Right angle) ಸುಮಾರು 90 ಮೀ ನಡೆಯಿರಿ (ಸಿ) 60 ಮೀ. ನಡೆದ ಮೇಲೆ ಒಂದು ದಂಡವನ್ನು ನೆಡಿರಿ. (ಬಿ) ಇಲ್ಲಿಂದ 30 ಮೀ. ಮುಂದೆ ಹೋಗಿ ಮತ್ತೊಂದು ದಂಡವನ್ನು ನೆಡಿರಿ (ಸಿ) ಈಗ 'ಎಸಿ' ಗೆ ಸಮಕೋನದಲ್ಲಿ 'ಸಿ' ಇಂದ ಹೊರಟು, ನದಿದಡದಿಂದ ಒಳ ನಾಡಿಗೆ ನಡೆಯಿರಿ. ಹೆಜ್ಜೆ ಹೆಜ್ಜೆಗೂ ನೋಡುತ್ತಾ ಮುಂದೆ ಹೋಗಬೇಕು. ಎಲ್ಲಿಗೆ ಆಚೆ ದಡದ ಎಕ್ಸ್ ವಸ್ತು, ನೀವು ನೆಟ್ಟಿರುವ 'ಬಿ' ದಂಡ ಹಾಗೂ ನೀವು ನಿಂತ ಸ್ಥಳ ಒಂದೇ ರೇಖೆಯಲ್ಲಿ ಬರುವುದೋ ಅಲ್ಲಿ ಒಂದು ದಂಡವನ್ನು ನೆಡಿರಿ (ಡಿ.) 'ಸಿ' ಯಿಂದ 'ಡಿ'ವರೆಗಿನ ದೂರವು, 'ಎ'ಯಿಂದ ಎಕ್ಸ್ ವರೆಗಿನ ಅರ್ಧದೂರವಾಗಿರುತ್ತದೆ. ಈ ದೂರವನ್ನು ಎರಡಷ್ಟು ಮಾಡಿದರಾಯಿತು. ನದಿಯ ಅಗಲವು ದೊರಕುತ್ತದೆ.



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227






**ಹರಿವ ನದಿಗಳಿಂದ**
**ಹರಸೊ ರಸಋಷಿಗಳಿಂದ**
**ಬರೆವ ಕವಿಗಳಿಂದ ಧನ್ಯ ನೀನು**
**ಸವಿಯ ನುಡಿಯ ಆಡುವ**
**ಅಮೃತ ಸವಿಯ ಸವಿಯುವ**
**ಕನ್ನಡಿಗರು ನಾವು ಧನ್ಯ ಧನ್ಯ**


**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

# ಉದ್ಯಾನಗಳು ನಗರದ ಶ್ವಾಸಕೋಶಗಳು...
# ...ಅವುಗಳನ್ನು ಚೊಕ್ಕಟವಾಗಿಡಿ





ಸಾರ್ವಜನಿಕ ಹಿತಾಸಕ್ತಿಯಿಂದ ಪ್ರಕಟ:




## ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ

ಟಿ. ಚೌಡಯ್ಯ ರಸ್ತೆ, ಕುಮಾರಪಾರ್ಕ್ ಪಶ್ಚಿಮ, ಬೆಂಗಳೂರು - 560 020

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 05-11-2012 (No. of Pages : 4 + 28 = 32)

## ಜಿಲ್ಲಾ ಮಟ್ಟದಲ್ಲಿ ನಡೆದ ವಿವಿಧ ಕಾರ್ಯಕ್ರಮಗಳ ನೋಟ


ಹಾಸನ


ಬೆಳಗಾವಿ


ಮೈಸೂರು


ಚಿತ್ರದುರ್ಗ


ಧಾರವಾಡ


ಬಿಜಾಪುರ


ಬೀದರ್


ಗದಗ


ರಾಯಚೂರು



SCOUTS
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**